


# ಅನ್ವೇಷಣೆ




ಸಾಹಿತ್ಯ ಸಂಸ್ಕೃತಿ ಕಲೆ

ಕಲೆ: ಚಿ.ಸು. ಕೃಷ್ಣಸೆಟ್ಟಿ

# ಸಾಧನೆಯ ಸಂತಸದಲ್ಲಿ ಕರ್ನಾಟಕ

## ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲೀಕರಣ

ಕರ್ನಾಟಕ ಸರ್ಕಾರವು ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿರುವ ಪ್ರತಿಯೊಬ್ಬರಿಗೆ ದಿನವೊಂದಕ್ಕೆ ೫೫ ಲೀಟರ್ (ಎಲ್‌ಪಿಸಿಡಿ)ಗಳಷ್ಟು ಸುರಕ್ಷಿತ ನೀರನ್ನು ಪೂರೈಸಲು ಕಂಕಣಬದ್ಧವಾಗಿದೆ.

* ಒಟ್ಟು ೫೬೬೮೨ ಜನವಸತಿಗಳಲ್ಲಿ ೩೧೬೬೮೨ ಜನವಸತಿಗಳಿಗೆ ೫೫ ಎಲ್‌ಪಿಸಿಡಿ ನೀರನ್ನು ಈಗಾಗಲೇ ಒದಗಿಸಲಾಗಿದೆ. ಉಳಿದ ಜನ ವಸತಿಗಳಿಗೆ ಮುಂದಿನ ಎರಡು ವರ್ಷಗಳಲ್ಲಿ ತಲಾ ೫೫ ಲೀಟರ್ ನೀರು ಪೂರೈಕೆ. * ಕಳೆದ ಒಂದು ವರ್ಷದ ಅವಧಿಯಲ್ಲಿ ೨೬೦೦ ಕೊಳವೆ ನೀರು ಸರಬರಾಜು ಯೋಜನೆ ಹಾಗೂ ಕಿರುನೀರು ಸರಬರಾಜು ಯೋಜನೆ ಹಾಗೂ ೪೦೦೦ ಕೈ ಪಂಪು ಕೊಳವೆ ಬಾವಿಗಳ ಮೂಲಕ ೩೦೦೦ಕ್ಕೂ ಹೆಚ್ಚು ಗ್ರಾಮಗಳಿಗೆ ಕುಡಿಯುವ ನೀರು ಸೌಲಭ್ಯ. * ಈ ವರ್ಷ ಗ್ರಾಮೀಣ ನೀರು ಸರಬರಾಜು ಯೋಜನೆಗಾಗಿ ರೂ. ೩೪೫.೫೫ ಕೋಟಿ ಮೀಸಲು. * ಗ್ರಾಮೀಣ ಪರಿಸರ ನೈರ್ಮಲ್ಯದ ಉದ್ದೇಶದೊಂದಿಗೆ "ಸ್ವಚ್ಛ ಗ್ರಾಮ ಯೋಜನೆ" ಜಾರಿ. ರಸ್ತೆ, ಚರಂಡಿ ಹಾಗೂ ಶೌಚಾಲಯ ಸೌಲಭ್ಯಗಳು, ಹೊಗೆರಹಿತ ಒಲೆ ಸರಬರಾಜು, ಗ್ರಾಮಗಳ ಹೊರವಲಯುಗಳಿಗೆ ಗೊಬ್ಬರ ಗುಂಡಿಗಳ ಸಾಗಾಣಿಕೆ ಇವು ಈ ಯೋಜನೆಯ ಪಂಚಸೂತ್ರಗಳು. ಈ ವರ್ಷ ಒಟ್ಟು ರೂ. ೨೦೦ ಕೋಟಿ ಮೊತ್ತದಲ್ಲಿ ೧೦೦೦ ಗ್ರಾಮಗಳಲ್ಲಿ ಈ ಯೋಜನೆ ಅನುಷ್ಠಾನ. *ನಿರ್ಮಲ ಗ್ರಾಮ ಯೋಜನೆಯಡಿ ೭.೪೮ ಲಕ್ಷ ಗ್ರಾಮೀಣ ಕುಟುಂಬಗಳಿಗೆ ಶೌಚಾಲಯ ನಿರ್ಮಾಣಕ್ಕಾಗಿ ಸಹಾಯಧನ ನೀಡಿಕೆ. * ಗ್ರಾಮೀಣ ಪ್ರದೇಶಗಳಲ್ಲಿ ಕುಟುಂಬ ಶೌಚಾಲಯ ನಿರ್ಮಾಣಕ್ಕಾಗಿ ಬಡತನ ರೇಖೆಗಿಂತ ಕೆಳಗಿನ ಕುಟುಂಬಕ್ಕೆ ರೂ. ೨೦೦೦ ಮತ್ತು ಬಡತನ ರೇಖೆಗಿಂತ ಮೇಲಿರುವ ಕುಟುಂಬಕ್ಕೆ ರೂ. ೧೨೦೦ಗಳ ಸಹಾಯಧನ ಸೌಲಭ್ಯ. * ಈ ವರ್ಷದಿಂದ ಗ್ರಾಮೀಣ ಪ್ರದೇಶಗಳ ಶಾಲೆಗಳಿಗೆ ಕುಡಿಯುವ ನೀರು ಮತ್ತು ಶೌಚಾಲಯ ವ್ಯವಸ್ಥೇ ಕಲ್ಪಿಸಲು ಹೊಸ ಕಾರ್ಯಕ್ರಮ. * ವಿಶ್ವಬ್ಯಾಂಕ್ ನೆರವಿನಿಂದ ರೂ. ೪೪೭ ಕೋಟಿ ವೆಚ್ಚದಲ್ಲಿ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯ ಯೋಜನೆ. ೧೧೦೫ ಗ್ರಾಮಗಳಲ್ಲಿ ಅನುಷ್ಠಾನ. ೯೨೩ ಗ್ರಾಮಗಳಲ್ಲಿ ಕಾಮಗಾರಿಗಳು ಪೂರ್ಣ. ಉಳಿದ ಗ್ರಾಮಗಳ ಕಾಮಗಾರಿಗಳು ಮಾರ್ಚ್ ೨೦೦೧ರೊಳಗಾಗಿ ಪೂರ್ಣ. * ಗದಗ್, ಹಾವೇರಿ, ಧಾರವಾಡ, ವಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳ ೨೦೧ ಗ್ರಾಮಗಳಲ್ಲಿ ೬೯.೭೦ ಕೋಟಿ ವೆಚ್ಚದ ನೆದರ್‌ಲ್ಯಾಂಡ್ ನೆರವಿನ ಕುಡಿಯುವ ನೀರು ಮತ್ತು ನೈರ್ಮಲ್ಯ ಸೌಲಭ್ಯ ಪೂರ್ಣ. * ಮೈಸೂರು, ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಪ್ರಾಯೋಗಿಕ ಸಮುದಾಯ ಆಧಾರಿತ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಯೋಜನೆಯ ಅನುಷ್ಠಾನ. ಇದಕ್ಕಾಗಿ ರೂ. ೧೫೨ ಕೋಟಿ ಮೀಸಲು. * ಮುಂದಿನ ೪ ವರ್ಷಗಳ ಅವಧಿಯಲ್ಲಿ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲೀಕರಣಕ್ಕಾಗಿ ರೂ. ೪, ೪೪೪ ಕೋಟಿ ಮೀಸಲು. * ಗ್ರಾಮೀಣ ನೀರು ಸರಬರಾಜು ಯೋಜನೆಗಳ ಕಾರ್ಯಾಚರಣೆ ಕುರಿತು ಸಮೀಕ್ಷೆ ಸರಾಸರಿ ಶೇ. ೯೩ ಯೋಜನೆಗಳು ಸುವ್ಯವಸ್ಥಿತ ಕಾರ್ಯಾಚರಣೆಯಲ್ಲಿರುವುದು ದೃಢೀಕರಣ. * ರಾಜ್ಯಾದ್ಯಂತ ಕುಡಿಯುವ ನೀರಿನ ಮೂಲಗಳ ಗುಣಮಟ್ಟ ಪರೀಕ್ಷೆ ಕಾರ್ಯಕ್ರಮ ಜಾರಿ. ಈ ವರ್ಷ ೨ ಲಕ್ಷ ಮೂಲಗಳ ಸಮೀಕ್ಷೆಯ ಗುರಿ. ಈಗಾಗಲೇ ೭೪,೦೦೦ ಮೂಲಗಳ ಗುಣಮಟ್ಟ ಪರೀಕ್ಷೆ ಸಂಪೂರ್ಣ. * ರಾಜ್ಯದ ೧೯೨ ಸಮಸ್ಯಾತ್ಮಕ (ಅಧಿಕ ಫ್ಲೋರೈಡ್ / ಅಧಿಕ ಲವಣಾಂಶ ಇತ್ಯಾದಿ ಕಾರಣಗಳಿಂದ ಕಲುಷಿತಗೊಂಡಿರುವ) ಗ್ರಾಮೀಣ ಜನವಸತಿಗಳಿಗೆ ಸುರಕ್ಷಿತ ಕುಡಿಯುವ ನೀರಿನ ಸರಬರಾಜಿಗಾಗಿ "ಸಬ್‌ಮಿಷನ್" ವಿಶೇಷ ಕಾರ್ಯಕ್ರಮ ಜಾರಿ.

ನೀರು ಅಮೂಲ್ಯ- ಅಗತ್ಯಕ್ಕೆ ತಕ್ಕಂತೆ ಬಳಸಿ, ಪೋಲಾಗದಂತೆ ಉಳಿಸಿ

ನಿರ್ಮಲ ಪರಿಸರವೇ ನಿಮ್ಮ ಮನಸ್ಸಿಗೆ ಮೂಲ

ಸಾಧಿಸಿದ್ದು ಬಹಳಷ್ಟು, ಸಾಧಿಸಬೇಕಾಗಿರುವುದು ಇನ್ನೂ ಬಹಳಷ್ಟು

**ಕರ್ನಾಟಕ ವಾರ್ತೆ**

ಪ್ರಗತಿಪರ ವಿಚಾರಗಳಿಗೆ

# ಅನ್ವೇಷಣೆ

ಸಾಂಸ್ಕೃತಿಕ ಚಟುವಟಿಕೆಗಳಿಗೆ

ಸಂಪುಟ : ೧೬ | ಸೆಪ್ಟಂಬರ್ - ಅಕ್ಟೋಬರ್ ೨೦೦೦ | ಸಂಚಿಕೆ : ೫೯



## ಈ ಸಂಚಿಕೆಯಲ್ಲಿ . . . . .



ಸಂಪಾದಕ, ಅನ್ವೇಷಣೆ
೩೭/೨ಎ, 'ನಿಸರ್ಗ' ನಾಗರಬಾವಿ ರಸ್ತೆ, ವಿಜಯನಗರ,
ಬೆಂಗಳೂರು - ೫೬೦ ೦೪೦. E-mail: halli_nagaraj@yahoo.com
ದೂರವಾಣಿ: 080 - 340 4244

ಚಂದಾ ವಿವರ: ವಾರ್ಷಿಕ ರೂ. ೧೦೦/- (ವ್ಯಕ್ತಿಗಳಿಗೆ), ರೂ. ೧೫೦/- ಸಂಸ್ಥೆ/ಗ್ರಂಥಾಲಯಗಳಿಗೆ

ಸಂಪಾದಕನ ಟಿಪ್ಪಣಿಗಳು....




ಆಳದ ಅನುಭವವನ್ನು ಮಾತು ಕೈ ಹಿಡಿದಾಗ
ಕಾವು ಬೆಳಕಾದಾಗ ಒಂದು ಕವನ
**ಕೆ.ಎಸ್. ನರಸಿಂಹಸ್ವಾಮಿ**

# ಡಾ. ಬಿ.ಸಿ. ರಾಮಚಂದ್ರ ಶರ್ಮ ೭೫

*"ಒಂದೊಂದು ಕವನವೂ ಭರವಸೆಯ ವ್ಯವಸಾಯ -*
*ಅಜ್ಞಾನದ ತಳಕ್ಕಿಳಿದು ಬಂದವನ ಭಾಗ್ಯ"*

೧೯೨೫, ನವೆಂಬರ್ ೨೮ರಂದು ಹುಟ್ಟಿದ ಬೋಗಾದಿಯ ಚಂದ್ರಶೇಖರ ಶರ್ಮ ರಾಮಚಂದ್ರ ಶರ್ಮ (ಬಿ.ಸಿ. ರಾಮಚಂದ್ರ ಶರ್ಮ)ರಿಗೆ ಎಪ್ಪತ್ತೈದರ ಹರೆಯ. ಅವರ ಕಾವ್ಯ ಕೃಷಿಗೆ ಐವತ್ತರ ಪ್ರಾಯ. ಇಷ್ಟು ವರ್ಷವೂ ಬರೆಯುತ್ತಾ ಬಂದ ಶರ್ಮ, 'ಒಂದೊಂದು ಕವನವೂ ಭರವಸೆಯ ವ್ಯವಸಾಯ' ಎಂಬ ಆಶಯ ಹಾಗೂ ಕನಸು ಹೊಂದಿದವರು. ೧೯೫೨ರಲ್ಲಿ ಮೊದಲ ಸಂಕಲನ 'ಹೃದಯಗೀತ' ಬಂದರೂ ಆ ಮೊದಲು ಕಾವ್ಯ ಕೃಷಿ ನಡೆಸಿದ್ದರು.

ಮುಂದಿನ ಒಂದು ವರ್ಷ (೧೯೫೩)ದಲ್ಲೇ ಹರೆಯ ಉಕ್ಕಿ ಹರಿಯಿತೇನೋ ಅನ್ನುವಂತೆ ಉತ್ಸಾಹಿತರಾಗಿ ಕಾವ್ಯ, ನಾಟಕ, ಸಣ್ಣಕಥಾ ಸಂಕಲನ ಹೊರತಂದರು. 'ಏಳು ಸುತ್ತಿನ ಕೋಟೆ' ಎಂಬ ಕವಿತಾ ಸಂಕಲನಕ್ಕೆ ಕೆ. ನರಸಿಂಹಮೂರ್ತಿ ಅವರು ಮುನ್ನುಡಿ ಬರೆದರು. ಕತೆಗಾರ ಆನಂದರ ಸಲಹೆಯೊಂದಿಗೆ ಕಥಾ ಕ್ಷೇತ್ರದಲ್ಲಿ ಹೆಜ್ಜೆ ಇಟ್ಟು 'ಮಂದಾರ ಕುಸುಮ' ಸಂಕಲನ ಹೊರತಂದರು. ಇದರೊಳಗಿನ ಒಂದು ಕತೆ 'ನಾಡು ಒಡೆಯಿತು' ಸಂಯುಕ್ತ ಕರ್ನಾಟಕದ ಕಥಾ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿತ್ತು. ಮುಂದೆ ಈ ಕತೆ 'ಹಿಂದೂಸ್ತಾನ್ ಟೈಮ್ಸ್'ನವರು ಪ್ರಕಟಿಸಿರುವ International Short Stories ಎಂಬ ಪುಸ್ತಕದಲ್ಲಿ "Two Countries and One Soul" ಎಂಬ ಹೆಸರಲ್ಲಿ ಇಂಗ್ಲಿಷ್‌ನಲ್ಲಿ ಪ್ರಕಟವಾಯಿತು. ಅದೇ ವರ್ಷ 'ಬಾಳಸಂಜೆ' ಐತಿಹಾಸಿಕ ನಾಟಕ, 'ನೀಲಿ ಕಾಗದ' ಎಂಬ ಸಾಮಾಜಿಕ ನಾಟಕ ಸಹಾ ಪ್ರಕಟಿಸಿದರು.

ಬುವಿ ನೀಡಿದ ಸ್ಫೂರ್ತಿ, ಹೇಸರಗತ್ತೆ, ಬ್ರಾಹ್ಮಣ ಹುಡುಗ, Gestures, ಈ ಶತಮಾನದ ನೂರು ಇಂಗ್ಲಿಷ್ ಕವನಗಳು, ಮಾತು ಮಾಟ, ದೆಹಲಿಗೆ ಬಂದ ಹೊಸವರ್ಷ, ಸಪ್ತಪದಿ ಎಂಬ ಕವನ ಸಂಕಲನಗಳನ್ನು ಹೊರತಂದು ಅರ್ಧ ಶತಮಾನಗಳ ಕಾಲದ ಕಾವ್ಯ ಕೃಷಿಯನ್ನು ಜೀವಂತವಾಗಿಸಿದ್ದಾರೆ ಶರ್ಮ. ಇಷ್ಟೆಲ್ಲ ಸಂಕಲನಗಳ ಹಿಂದೆ ಕವಿ ಮನಸ್ಸು ಇದೆ ಎಂಬುದು ಸ್ಪಷ್ಟ. ಹೀಗಾಗಿ ಶರ್ಮ ನಾಟಕ, ಸಣ್ಣಕತೆಯಲ್ಲಿ ಕೃಷಿ ಮಾಡಿದ್ದರೂ, ಕವಿಯೆಂದೇ ಗುರ್ತಿಸಿಕೊಂಡಿದ್ದಾರೆ.

ಕಟು ಸತ್ಯದ, ಮೊನಚು ಮಾತಿನ, ತಿವಿಯುವ ವ್ಯಂಗ್ಯದ ಮಾತುಗಳಿಂದ ನಿಷ್ಠುರವಾದಿ ಆಗಿರುವ ರಾಮಚಂದ್ರ ಶರ್ಮ ನವ್ಯದ ಪ್ರವರ್ತಕರಲ್ಲಿ ಪ್ರಮುಖರು. ಗೋಕಾಕ್, ಅಡಿಗ, ಚಿತ್ತಾಲ, ಎ.ಕೆ. ರಾಮಾನುಜನ್, ಅನಂತಮೂರ್ತಿ, ಲಂಕೇಶ್, ಶಾಂತಿನಾಥ ದೇಸಾಯಿ ಅವರ ಸಂದರ್ಭದಲ್ಲೇ ಹೆಚ್ಚು ಪ್ರಖರವಾಗಿ ನವ್ಯಕವಿಯೆಂದು ಬೆಳಗಿದವರು ಶರ್ಮ, ಇವೊತ್ತು ನವ್ಯದಲ್ಲಿ ಉಳಿದ ಕೆಲವು ಕೊಂಡಿಗಳಲ್ಲಿ ಶರ್ಮರೂ ಒಬ್ಬರು. ಬದಲಾದ ಸಾಹಿತ್ಯದ ಕಾಲಘಟ್ಟದಲ್ಲಿ ಶರ್ಮ ನಡೆದು ಬಂದರೂ ನವ್ಯದ ಸೆಳೆತದಲ್ಲೇ ಬಂಧಿಯಾದವರು. ಈ ಬಂಧನ ಕವಿಯು ಕಾವ್ಯವನ್ನು ಭಾವಗೀತೆಯಾಗಿ ಪರಿವರ್ತಿಸಿಕೊಂಡು ಹಾಡಲು ವಿರೋಧ ವ್ಯಕ್ತಪಡಿಸುತ್ತ ಬಂದದ್ದಲ್ಲದೆ, ಇಂಥ ಹಾಡುಗಬ್ಬದ ಗೀತೆ ರಚಿಸುವ ಕವಿಗಳನ್ನು 'ಕವಿಗಳೇ ಅಲ್ಲ!' ಎಂದು ಸಾರ್ವಜನಿಕ ವೇದಿಕೆಯಲ್ಲೇ ಟೀಕಾ ಪ್ರಹಾರ ಬಿಟ್ಟವರು ಇವರು. "ಕವಿತೆಯನ್ನು ಓದುಗ ಓದಿಕೊಂಡು ಆನಂದಿಸಬೇಕೇ ಹೊರತು, ಅದನ್ನು ಹಾಡಾಗಿಸಿ, ರಾಗಕ್ಕೆ ಈಡು ಮಾಡಿ ಸಿ. ಅಶ್ವಥ್‌ರೋ, ಶಿವಮೊಗ್ಗ ಸುಬ್ಬಣ್ಣನವರೋ ಓದುಗನಿಗೆ ತಲುಪಿಸುವುದೇಕೇ?" ಎಂದು ಖಾರವಾಗಿ ಶರ್ಮ ವಾರ ಪತ್ರಿಕೆಯೊಂದಕ್ಕೆ ನೀಡಿದ್ದ ಸಂದರ್ಶನವೊಂದರಲ್ಲಿ ಹೇಳಿದ್ದಾರೆ.

ನವ್ಯ ಕಾವ್ಯ ಕಾಮಕೇಂದ್ರಿತ ವಸ್ತುವನ್ನೊಳಗೊಂಡು ಜನಕ್ಕೆ ಹತ್ತಿರವಾಗಲಿಲ್ಲ, ನಿಮ್ಮನ್ನೂ ಒಳಗೊಂಡ ಹಲವು ಕವಿಗಳಿಗೆ ಇದು ಅನ್ವಯಿಸುತ್ತದೆಯಿಲ್ಲವೆ? ಎಂಬ ನಾನು ಪಡೆದ ಸಂದರ್ಶನದ ಪ್ರಶ್ನೆಯೊಂದಕ್ಕೆ ಶರ್ಮ ಅವರು ಹೇಳಿದ್ದು ಹೀಗೆ : "ಕಾವ್ಯಕ್ಕೆ ವ್ಯಕ್ತಿಯೇ ಮುಖ್ಯ. ಕಾವ್ಯದ ದೃಷ್ಟಿಯಿಂದ ವ್ಯಕ್ತಿ ಮುಖ್ಯವೋ, ಸಮಾಜ ಮುಖ್ಯವೋ ಅನ್ನೋದು ಮುಖ್ಯ ಪ್ರಶ್ನೆ. ನಿಜವಾದ ವ್ಯಕ್ತಿಯ ತಾಕಲಾಟ, ಒದ್ದಾಟ ಕಾವ್ಯದಲ್ಲಿ ಅಭಿವ್ಯಕ್ತಿಯಾಗುತ್ತದೆ. ಕಾವ್ಯ ಹುಟ್ಟೋದು ಗುಂಪಿನಿಂದಲ್ಲ. ಕಾವ್ಯಕ್ಕೆ ವಸ್ತು ಯಾರು ಅಂದ್ರೆ "ನಾನು!", ನಾನು ಅಂದ್ರೆ ನನ್ನ ವೈಯಕ್ತಿಕ ಅಂಶ, ಜೀವನ, ಅಲ್ಲದೆ ನನ್ನೊಳಗಿರುವ ಪ್ರಪಂಚವೂ ನಾನು. ನಾನಿಲ್ಲದ ಕಾವ್ಯ ಪ್ರಬಂಧವಾಗುತ್ತದೆ. ವೈಜ್ಞಾನಿಕ ಲೇಖನವಾಗುತ್ತದೆ... ನಾನು ಅನ್ನೋದು ಕಾವ್ಯಕ್ಕೆ ಪ್ರಧಾನ. ಹಾಗೇ ಸಮಾಜ ಕೂಡ. ನನ್ನೊಳಗೆ ನನ್ನ ಅನುಭವ ಕಾರಣವಾಗಿ ಪ್ರವೇಶ ಮಾಡಿ ಅಲ್ಲಿ ಅರಳುತ್ತಿರುವ ಸಮಾಜ, ಮುಖ್ಯವಾಗಿ ನಾನು, ನನ್ನೊಳಗು ಆಗುತ್ತದೆ. ಕಾಮವನ್ನು ಒಂದು Metaphor ಆಗಿ ಉಪಯೋಗಿಸಬೇಕು. ಮನುಷ್ಯ, ಮನುಷ್ಯ ಸಂಬಂಧವನ್ನು ಅರ್ಥಮಾಡಿಕೊಳ್ಳೋ ಪ್ರಯತ್ನ ಮಾಡಬೇಕು. ಕತೆ, ಕಾದಂಬರಿಗಳಲ್ಲೂ ಅಷ್ಟೇ..."

ಕಾಮಕೇಂದ್ರಿತ ವಸ್ತುವನ್ನೊಳಗೊಂಡ ಕವಿತೆಗಳೆಂಬ ಟೀಕೆಗೆ ಸಂಬಂಧಿಸಿದಂತೆ ಶರ್ಮರ 'ಏಳು ಸುತ್ತಿನ ಕೋಟೆ' ಕಾವ್ಯದ ಬಗ್ಗೆ ವಿಮರ್ಶಕ, ಚಿಂತಕ ಡಾ. ಡಿ.ಆರ್. ನಾಗರಾಜ್ ಹೀಗೆ ದಾಖಲಿಸಿದ್ದಾರೆ. "ಕಾಮದ ಹುಟ್ಟು ಮತ್ತು ವಹಿವಾಟುಗಳನ್ನು ಕುರಿತ ಕವಿತೆ ಇದಾಗಿದ್ದರೂ ಇಲ್ಲಿ ಅಶ್ಲೀಲತೆಯಿಲ್ಲ. ಈ ಕವನದಲ್ಲಿ ಕಾಮವನ್ನು ಕಾಣಲು ನಿರಾಕರಿಸುವ ಓದುಗನೊಬ್ಬ ಅದನ್ನು ಜೀವನದ ಯಾವುದೇ ಶಾಶ್ವತ ಶಕ್ತಿಯ ಬಗೆಗಾದರೂ ಹೊಂದಿಸಿ ಓದಿಕೊಳ್ಳಬಹುದು. ಈ ಕವಿತೆಯೊಳಗೆ ಒಂದು ಅಸ್ಪಷ್ಟ ಮೋಹಕತೆ ಇದೆ. ಶರ್ಮರ ದಟ್ಟ ಸಭ್ಯತೆಗೆ, ದಟ್ಟ ಸಾಂಪ್ರದಾಯಕತೆಗೆ ಒಂದು ಕಾಲಕ್ಕೆ ಮಹಾಕ್ರಾಂತಿಕಾರಿಯಾಗಿ ಕಂಡ ಈ ಕವಿತೆ ಸಾಕ್ಷಿ. ಇಲ್ಲಿ ಸಾಂಪ್ರದಾಯಿಕತೆ ಎನ್ನುವುದು

ಮನಃಸ್ಥಿತಿಯಲ್ಲ. ಬದಲಾಗಿ ಶೈಲಿ, ರೂಪಕ ವಿಧಾನ. ಪದ್ಯ ಕಾಮದ ಬಗ್ಗೆ ಇದ್ದರೂ ಮುಜುಗರ ಹುಟ್ಟಿಸುವ ಒಂದೇ ಒಂದು ರೂಪಕ ಇಲ್ಲಿಲ್ಲ. ಈ ಸಭ್ಯತೆಯ ಮುಂದೆ ಶರ್ಮರ ಕುಲಗುರು ಆದಿ ಶಂಕರಾಚಾರ್ಯರೇ ಮಹಾ ಪೋಲಿಯಾಗಿ ಕಾಣುತ್ತಾರೆ."

"ನಾನು" ಅಂದ್ರೆ ನನ್ನ ವೈಯಕ್ತಿಕ ಅಂಶ, ಜೀವನ ಎಂದೇಳಿರುವ ಶರ್ಮ, ಇಂಥ ಕಾವ್ಯದ ವಸ್ತುವನ್ನೊತ್ತು ಇಪ್ಪತ್ನಾಲ್ಕು ವರ್ಷ ಭಾರತದಿಂದ ಹೊರಗಿದ್ದರು. ಇಥಿಯೋಪಿಯಾ, ಇಂಗ್ಲೆಂಡ್, ಜ್ಯಾಂಬಿಯಾ ಹಾಗೂ ಮಲಾವಿ ರಾಷ್ಟ್ರಗಳಲ್ಲಿ ಅಧ್ಯಾಪಕರಾಗಿ, ಮನಃಶಾಸ್ತ್ರಜ್ಞರಾಗಿ ಸೇವೆ ಸಲ್ಲಿಸಿದರು. ವಲಸೆ ಹೋದ ಭಾರತದ ಮಕ್ಕಳ ಬುದ್ಧಿಮಾಂದ್ಯ ಪ್ರಮಾಣದ ಬಗ್ಗೆ ಪ್ರಬಂಧ ಬರೆದು 1971ರಲ್ಲಿ ಲಂಡನ್ ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ., ಪದವಿ ಗಳಿಸಿದರು.

೧೯೮೨ರಲ್ಲಿ ಭಾರತಕ್ಕೆ ಮರಳಿದ ಶರ್ಮ, ಬೆಂಗಳೂರಿನ ಜಯನಗರದಲ್ಲಿ ಕಟ್ಟಿರುವ 'ಪರಾಶರಾ'ದಲ್ಲಿ ವಾಸಿಸುತ್ತಿದ್ದಾರೆ. ಶರ್ಮರ ಪತ್ನಿ ಪದ್ಮಾಶರ್ಮ ಉತ್ತಮ ಅನುವಾದಕರು. ಹಲವಾರು ಉತ್ತಮ ಕತೆ, ಕಾದಂಬರಿಗಳನ್ನು ಕನ್ನಡದಿಂದ ಇಂಗ್ಲಿಷ್‌ಗೆ ತರ್ಜುಮೆ ಮಾಡಿದ್ದಾರೆ. ಈಚೆಗೆ ಕುವೆಂಪು ಅವರ 'ಕಾನೂರು ಹೆಗ್ಗಡತಿ' ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ. ತಮ್ಮ ವಯೋಮಾನದ ಸಾಹಿತಿ ಮಿತ್ರರಿಗೆ ಸಿಕ್ಕ ಸಾಹಿತ್ಯ ಪ್ರಚಾರ, ಪ್ರಶಸ್ತಿ ಹಾಗೂ ಸ್ಥಾನಮಾನಗಳು ಶರ್ಮರಿಗೆ ಲಭ್ಯವಾಗಲಿಲ್ಲ. ಕೆಲವು ಪುರಸ್ಕಾರಗಳಂತೂ ತಡವಾಗಿ ಸಂದಿವೆ ಎಂಬುದು ನಿಜ. ೧೯೯೬ರ 'ಸಪ್ತಪದಿ' ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೮) ದೊರೆಯಿತು. ಮಗ ನಟರಾಜ ಶರ್ಮ ಬರೋಡಾದಲ್ಲಿ ಕಲೆಯ ಉಪನ್ಯಾಸಕರಾಗಿದ್ದರೆ, ಇಬ್ಬರು ಹೆಣ್ಣು ಮಕ್ಕಳಲ್ಲಿ ಮಾಯಾ ಶರ್ಮ ದೂರದರ್ಶನ (ಖಾಸಗಿ), ಸಂಧ್ಯಾ ವಿಜ್ಞಾನಿ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಎಪ್ಪತ್ತೈದರ ಶರ್ಮರಿಗೆ ಅನ್ವೇಷಣೆಯ ಶುಭಾಶಯಗಳು.

ಶರ್ಮ ಅವರ ಕವಿತೆಯ ಓದು ಹಾಗೂ ಅವರ ಸ್ವಭಾವದಲ್ಲಿನ ಬದುಕನ್ನು ಕಂಡವರಿಗೆ ಅವರೊಳಗಿನ ಕವಿ ಹಾಗೂ ಪ್ರಾಮಾಣಿಕತೆಯ ಅರಿವು ಆಗುತ್ತದೆ. ಅವರ ಮಾತುಗಳು ವ್ಯಂಗ್ಯದಂತೆ ತಿವಿಯುತ್ತವೆ. ಇಷ್ಟಾಗ್ಯೂ ಅವರ ಕಾವ್ಯ-ಬದುಕ ಕುರಿತು ನಾನು ಬರೆದ 'ಶರ್ಮ ೭೫' ಕವಿತೆ ದಿನಾಂಕ ೨೬.೧೧.೨೦೦೦ದಂದು 'ಕನ್ನಡಪ್ರಭ'ದಲ್ಲಿ ಪ್ರಕಟವಾಯಿತು. ಅದನ್ನಿಲ್ಲಿ ಮತ್ತೆ ಪ್ರಕಟಿಸುತ್ತಿದ್ದೇನೆ.

## ಶರ್ಮಾ ೭೫

ಬ್ರಾಹ್ಮಣ ಹುಡುಗ
ಹೃದಯಗೀತಕ್ಕಾಗಿ ಹಂಬಲಿಸಿ
ಏಳು ಸುತ್ತಿನ ಕೋಟೆ ಸುತ್ತಿ
ಸುರತ ಸಂಪ್ರೀತಿಯ ಕಡಲಾಚೆ
ಕರೆಗಾಗಿ ಓಡಿ ಹಿಡಿದದ್ದು

ಇಥಿಯೋಪಿಯಾದ ಗುಡ್ಡಗಾಡ ಹೇಸರಗತ್ತೆ!
"ರಾತ್ರಿ ಹಾದರದ ಮದವಳಿದು
ಜಾತ್ರೆಗೆ ಬಂದು ಕೊಂಡ ಆದರದ ರೋಲ್ಡ್‌ಗೋಲ್ಡ್ ಬುಗುಡಿ."

* * *

ಪಾಂಡು - ಮಾದ್ರಿಯಲ್ಲಿ ಮೋಕ್ಷದ
ಹುಡುಕಾಟ. ಬುಗುರಿಯಾಟದಲ್ಲಿ
ಹೆಣ್ಣ ಮೊಲೆ ತುದಿಗೆ ಮುತ್ತಿಟ್ಟ
ಮಾತು - ಮಾಟಗಾರ!

* * *

ನೆಲದೊಡಲ ಪ್ರೀತಿಗೆ
ನೆಲ ಸಂಸ್ಕೃತಿಯ ಬೇರಿಗೆ
ನೆಲದ ನೆಲೆ ಹರಸಿ ದೆಹಲಿಗೆ
ಬಂದ ಹೊಸವರ್ಷಕ್ಕೆ ಪಾದಾರ್ಪಣೆ.ಕಾವ್ಯ ಕುಂಡಲಿಯಲ್ಲಿ
ಬದುಕ ಪ್ರತಿಬಿಂಬ ಕಂಡವರೀಗ
ಪರಾಶರಾದ ಬಂಧಿ.ಅನನ್ಯ ಪ್ರೀತಿಯಲ್ಲಿ
ಎಲ್ಲರನ್ನೂ ತೆಕ್ಕೆಗೆ ಸೆಳೆವ ತವಕ.

* * *

ಏಳೂವರೆ ದಶಕದ ಬದುಕು ಹೊತ್ತು ತಂದು
ಅಮೇಜಾನ್ ಮೆಕ್ಕಲು ಮಣ್ಣ ಕಸುವನ್ನು
ಗಂಗೆ ತುಂಗೆ ಕಾವೇರಿಯರ ತಡದಲ್ಲಿಟ್ಟು
ಬುತ್ತಿಗಂಟು ಬಿಚ್ಚಿಟ್ಟದ್ದು ಜಗಲಿಯಲ್ಲಿ!

* * *

ಹಿಡಿದರೆ ನುಣುಚುವ, ಹರಿದರೆ ನೀರ ಹನಿಯಂತೆ
ಕ್ರಮಿಸುವ ಪಾದರಸ ಬೆರಳಲ್ಲಿ ಹಿಡಿದು
ಮೆದುಳ ಜ್ವಾಲೆಗೆ
ಕವನದ ಕನವರಿಕೆ
ಇಷ್ಟು ಎಷ್ಟಾದರೂ ಕನಸಿಗನ ಒಂದೊಂದು ಕವನವೂ
ಭರವಸೆಯ ವ್ಯವಸಾಯ -
ಅಜ್ಞಾನದ ತಳಕ್ಕಿಳಿದು ಬಂದವನ ಭಾಗ್ಯ.

- ಆರ್.ಜಿ.

*(ನವೆಂಬರ್ ೨೮, ೨೦೦೦ಕ್ಕೆ ಕವಿ ಡಾ. ಬಿ.ಸಿ. ರಾಮಚಂದ್ರ ಶರ್ಮರಿಗೆ ೭೫ ವರ್ಷ. ಅವರ ಕಾವ್ಯ - ಬದುಕ ನೆನೆಕೆಗೆ ಈ ಕವನ.)*

# ಪತ್ರ ಮುಖೇನ 'ಮುನ್ನುಡಿ'ಗೊಂದು ಕನ್ನಡಿ

ಅಂಚೆ ಮುಖೇನ ನನ್ನ ಶ್ರೀಮತಿ ಎಚ್.ಎಲ್. ಪುಷ್ಪಳಿಗೆ ಬಂದ ಒಂದು ಪತ್ರ ಹೀಗಿದೆ:

ಮಾನ್ಯರೆ,

ಕನ್ನಡದ ಖ್ಯಾತ ಕತೆಗಾರ ಬೊಳವಾರರ ಕತೆಯಾಧರಿಸಿದ 'ಮುನ್ನುಡಿ' ಚಲನಚಿತ್ರ, ಜಯನಗರದ 'ಪುಟ್ಟಣ್ಣ ಚಿತ್ರಮಂದಿರ'ದಲ್ಲಿ ಪ್ರದರ್ಶಿತವಾಗುತ್ತಿದೆ.

ದಯಮಾಡಿ ಬಂದು ಚಿತ್ರ ನೋಡಿ.

ಸದಭಿರುಚಿಯ, ಕಲಾತ್ಮಕ ಕನ್ನಡ ಚಲನಚಿತ್ರಗಳನ್ನು ಪ್ರೋತ್ಸಾಹಿಸಿ.

**ಪಿ. ಶೇಷಾದ್ರಿ, ನಿರ್ದೇಶಕ (ನವಚಿತ್ರ ಪರವಾಗಿ)**

ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಂವೇದನೆಯ ವಿಶಿಷ್ಟ ಕತೆಗಾರ ಬೊಳುವಾರ ಮಹಮದ್ ಕುಂಞಿ ಅವರ 'ದೇವರುಗಳ ರಾಜ್ಯದಲ್ಲಿ' ಪ್ರಕಟವಾಗಿ ಹದಿನೈದು ವರ್ಷಗಳಾಯಿತು. ಸಂಕಲನದ ಒಂಬತ್ತನೇ ಹಾಗೂ ಕೊನೆಕತೆ "ಮುತ್ತುಚ್ಚೇರ" "ಮುನ್ನುಡಿ" ರೂಪದಲ್ಲಿ ಚಲನಚಿತ್ರವಾಗಿ ಪಿ. ಶೇಷಾದ್ರಿ ನಿರ್ದೇಶನದಲ್ಲಿ ಅರಳಿ ನಿಂತಿದೆ. ಇದು ಮುಸ್ಲಿಂ ಸಂವೇದನೆಯನ್ನು ಪೂರ್ಣವಾಗಿ ಚಿತ್ರಿಸಿದ ಪ್ರಥಮ ಕನ್ನಡ ಚಿತ್ರವೂ ಹೌದು.

ಎಪ್ಪತ್ತರ ದಶಕದಲ್ಲಿ ಅರ್ಥಪೂರ್ಣ ಹೊಸ ಅಲೆಯ ಚಿತ್ರಗಳು ಕನ್ನಡ ಚಿತ್ರರಂಗದ ಹೆಸರನ್ನು ರಾಷ್ಟ್ರೀಯ ಅಂತರರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ದವು. ಈಚಿನ ವರ್ಷಗಳಲ್ಲಿ ಇಂಥ ಅಲೆ ಕ್ಷೀಣಿಸುತ್ತಾ ಹೋಗಿದ್ದು ನಿಜ. ಪಕ್ಕದ ಮಲೆಯಾಳಂ ಚಿತ್ರಗಳಲ್ಲಿನ ಪ್ರಯೋಗಶೀಲತೆ, ಕಲಾತ್ಮಕತೆ ಕನ್ನಡಕ್ಕೆ ಇಲ್ಲವಾಯಿತು. ಕಾರ್ನಾಡ್, ಕಾಸರವಳ್ಳಿ, ನಾಗಾಭರಣ, ಕೇಸರಿ ಮುಂತಾದ ಬೆರಳೆಣಿಕೆ ನಿರ್ದೇಶಕರು ಪ್ರಯೋಗಾತ್ಮಕ ಚಿತ್ರಗಳಲ್ಲಿ ನಿರತರಾಗಿ ಆಗೊಮ್ಮೆ ಈಗೊಮ್ಮೆ ಎನ್ನುವಂತೆ ರಾಷ್ಟ್ರೀಯ ಮಟ್ಟದಲ್ಲಿ ಹೆಸರು ತಂದಿರುವುದು ವಾಸ್ತವ.

ಈ ಮಾತುಗಳ ಹಿನ್ನೆಲೆಯಲ್ಲಿ ಮೇಲಿನ ಪತ್ರಕ್ಕೆ ಅರ್ಥವ್ಯಾಪ್ತಿ ಇದೆಯೆಂದುಕೊಂಡಿದ್ದೇನೆ. ಜಾಗತೀಕರಣದ ಹಿನ್ನೆಲೆಯಲ್ಲಿ ನಮ್ಮ ಸಾಂಸ್ಕೃತಿಕ ಅಭಿರುಚಿಯೂ ಕವಲಾಗಿದೆ. ಆಯ್ಕೆ, ರುಚಿ ಭಿನ್ನವಾಗಿದೆ.

ಮಾಧ್ಯಮಗಳು ಅದರಲ್ಲೂ ವಿದ್ಯುನ್ಮಾನ ಮಾಧ್ಯಮಗಳು ಮೆಲುಗೈ ಸಾಧಿಸಿದ್ದು ಚಲನ ಚಿತ್ರದಂತ ಪ್ರಭಾವಿ ದೃಶ್ಯ ಮಾಧ್ಯಮ ಕೂಡ ತನ್ನ ವೈಭವ ಕುಗ್ಗಿಸಿಕೊಂಡಿದೆ. ಹೀಗಾಗಿ ಅಪರೂಪಕ್ಕೆ ಬರುವ ಒಂದು ಒಳ್ಳೆಯ ಚಿತ್ರವನ್ನು ಜನ ಥೇಟರ್‌ಗೆ ಹೋಗಿ ನೋಡುವುದೂ ಕಡಿಮೆ ಆಗಿದೆ. ಇದಕ್ಕೊಂದು ಹೊಸ ಉಪಾಯ 'ನವಚಿತ್ರ' ತಂಡಕ್ಕೆ ಹೊಳೆದದ್ದೇ 'ಈ ಪತ್ರ ಮುಖೇನ ಸಂಪರ್ಕ ಸೇತು' ಯೋಚನೆ, ಯೋಜನೆ!

ಸಾಹಿತಿಗಳು, ಕಲಾವಿದರು, ಸಾಮಾಜಿಕ ಕಾರ್ಯಕರ್ತರು, ಸಂವೇದನಾಶೀಲ ಚಿಂತಕರು, ಪತ್ರಕರ್ತರಿಗೆ ವಿವಿಧ ಸಂಘ ಸಂಸ್ಥೆಗಳಿಗೆ ವೈಯಕ್ತಿಕ ಪತ್ರ ಬರೆದು, "...ಇಂಥದ್ದೊಂದು ಚಿತ್ರ ಬಂದಿದೆ. ನೋಡಿ, ಪ್ರೋತ್ಸಾಹಿಸಿ", ಎನ್ನುವ ಮನವಿ ನಿಜಕ್ಕೂ ಸ್ವಾಗತಾರ್ಹ. ಒಂದು ಸಾವಿರ ಪತ್ರ ಬರೆದರೆ ಕೊನೆ ಪಕ್ಷ ಶೇ. ೪೦-೫೦ ಜನ ನೋಡಿದರೂ, ನಾಲ್ಕು ನೂರು ಐನೂರು ಜನ ಚಿತ್ರ ವೀಕ್ಷಿಸಿದಂತಾಗುತ್ತದೆ.

ಅದೇನೇ ಇರಲಿ, "ಮುನ್ನುಡಿ" ರಾಜಧಾನಿಯಲ್ಲಿ ಮೂರು ಚಿತ್ರ ಮಂದಿರಗಳಲ್ಲಿ ಒಂದೊಂದು ವಾರ ಪ್ರದರ್ಶನ ಕಂಡಿದೆ. ಕೈಲಾಸ, ಪುಟ್ಟಣ, ಸವಿತಾಗಳಲ್ಲಿ ಸರದಿಯಂತೆ ಪ್ರದರ್ಶಿತವಾಗಿದೆ. ಆಸಕ್ತರಿಗೆ ಬಡಾವಣೆಗಳಲ್ಲಿ ನೋಡಲು ಒಳ್ಳೆ ಅವಕಾಶವಾಗಿದೆ. ನಿರೀಕ್ಷಿತ ಪ್ರಮಾಣದಲ್ಲಿ ಜನ ಬಾರದಿದ್ದರೂ ಇಂಥದ್ದೊಂದು ಪ್ರಯತ್ನವನ್ನು ಕಾರ್ಡ್‌ನಲ್ಲಿ ತಿಳಿಸುವ ಯೋಜನೆ ಮುಂದಿನ ಕಲಾತ್ಮಕ ಚಿತ್ರಗಳಿಗೂ ಮಾದರಿ ಅನ್ನುವುದರಲ್ಲಿ ಸಂದೇಹವಿಲ್ಲ. ಮಂಗಳೂರಿನಲ್ಲಿ ಪ್ರಥಮ ಬಿಡುಗಡೆ ಆದ ಈ ಚಿತ್ರ ೫ ವಾರ ಪ್ರದರ್ಶಿತವಾಗಿ, ರಂಜಾನ್ ಪ್ರಯುಕ್ತ ಮುಂದಿನ ಪ್ರದರ್ಶನ ರದ್ದಾಗಿದೆ.

"ಮುನ್ನುಡಿ" ಆದ "ಮುತ್ತುಚ್ಚೇರ" ಒಂದು ಹಳ್ಳಿ. ಈ ನಾಡಿನಲ್ಲಿ ಮುಸ್ಲಿಂರನ್ನು ಪಾಪ, ಕ್ರೌರ್ಯ ಮತ್ತು ವಿದ್ರೋಹಗಳ ಸಂಕೇತಗಳನ್ನಾಗಿ ಪರಿವರ್ತಿಸುವ ಬರ್ಬರತೆಯ ವಿರುದ್ಧ ದನಿ ಎತ್ತಿದ ವಸ್ತುವನ್ನೆತ್ತಿಕೊಂಡ ಬೊಳುವಾರರ ಕತೆ ಮನಮಿಡಿವಲ್ಲಿ ಯಶಸ್ವಿ ಆಗಿದೆ. ಅದನ್ನು ಚಿತ್ರವಾಗಿಸುವಲ್ಲಿ ವಹಿಸಿದ ಸಂಯಮ, ತಾಳ್ಮೆ, ಎಚ್ಚರಿಕೆ, ಸೂತ್ರಬದ್ಧ ನಡೆ - ಚಿತ್ರದ ಆರಂಭದಿಂದ ಅಂತ್ಯದವರೆಗೂ ಗೋಚರಿಸುತ್ತದೆ.

ಅರಬ್ ಶ್ರೀಮಂತರು ತಮ್ಮ ಖರ್ಜೂರ ಹಾಗೂ ತೈಲದ ಉತ್ಪತ್ತಿಯಿಂದ ಭಾರತದಂತ ಅಭಿವೃದ್ಧಿ ಶೀಲ ರಾಷ್ಟ್ರಕ್ಕೆ ಬಂದು, ಇಲ್ಲಿನ ಬಡ ಮುಸ್ಲಿಂ ಯುವತಿಯನ್ನು ಮದುವೆಯಾಗಿ ಕೆಲತಿಂಗಳು ಜೊತೆಗಿದ್ದು, ಪುನಃ ತಮ್ಮ ದೇಶಕ್ಕೆ ಹೋಗಿ ತಿರುಗಿಯೂ ನೋಡದಂಥ ಸ್ಥಿತಿಯಿದೆ. ಅಲ್ಲದೇ ಧರ್ಮದ ರಕ್ಷಣೆಯಲ್ಲಿ 'ತಲಾಖ್, ತಲಾಖ್, ತಲಾಖ್' ಎಂದೇಳಿ ಬಡ ಹೆಣ್ಣಿನ ಬದುಕಲ್ಲಿ ಕರಾಳ ಇತಿಹಾಸ ನಿರ್ಮಿಸಿ, ಕ್ರೌರ್ಯ ಮೆರೆಯುವುದು ಇನ್ನೊಂದೆಡೆ ಇದೆ. ಇದು ಮುನ್ನುಡಿಯ ವಸ್ತು. ಬಡತನ, ಅನಕ್ಷರತೆ, ಧರ್ಮಾಂಧತೆಗಳಲ್ಲಿ ಸಿಲುಕಿದ ಧರ್ಮವೊಂದರ ವಸ್ತುವನ್ನು ಪ್ರಭಾವಿ ಚಲನಚಿತ್ರ ಮಾಧ್ಯಮದಲ್ಲಿ ಹೇಳುವಾಗ ಯಾವುದೇ ವಿವಾದಕ್ಕೂ ಎಡೆಮಾಡದಂತೆ ಎಚ್ಚರ ವಹಿಸಿರುವುದು ನಿರ್ದೇಶಕ ಹಾಗೂ ಕಥೆಗಾರರ ಜಾಣ್ಮೆಗೊಂದು ಉದಾಹರಣೆ. ಮೂಲಕತೆಯ ಬೋಳುವಾರು ಚಿತ್ರಕತೆಯಲ್ಲಿ ಪಾಲುದಾರರಲ್ಲದಿದ್ದರೂ, ಸಂಭಾಷಣೆಗೆ ಸೂತ್ರ ಪೋಣಿಸಿರುವುದರಿಂದ ಎಚ್ಚರಿಕೆ ಕಾಣಬರುತ್ತದೆ. ಹೀಗಾಗಿ ಮುಸ್ಲಿಂ ಶೋಷಿತ ಹೆಣ್ಣಿನ ಕತೆ, ಮತಾಂಧ ಧರ್ಮಗುರುಗಳು ಮತ್ತು ಪುಡಾರಿಗಳಿಂದ (ಮುಸ್ಲಿಂ ಜನತೆಗೆ) ಆಗುತ್ತಿರುವ ಅನ್ಯಾಯಗಳ ಪ್ರತಿಭಟನೆಯ ಕಿಡಿ ಈ ಚಿತ್ರದಲ್ಲಿ ಮಿಂಚಾಗಿ ಕಾಣಿಸಿದೆ. ಪ್ರಪ್ರಥಮ ಬಾರಿಗೆ ಹೆಣ್ಣೊಬ್ಬಳ ಪ್ರತಿಭಟನೆ ನೂರಾರು ಹೆಣ್ಣುಗಳ ಮೊದಲ ಧ್ವನಿಯಂತೆ, 'ಮುನ್ನುಡಿ'ಯಂತೆ ಇತಿಹಾಸ ನಿರ್ಮಿಸುತ್ತದೆ.

ಈ ಇತಿಹಾಸಕ್ಕೆ ತಾರಾ ಅತ್ಯುತ್ತಮ ಅಭಿನಯ ನೀಡಿ, ವಾಸ್ತವದ ಕನ್ನಡಿಗೆ ಮುನ್ನುಡಿ ಬರೆದಿದ್ದಾಳೆ. ಅರಬರೆಗೆ ಹೆಣ್ಣನ್ನು ಕರೆತರುವ ತಲೆ ಹಿಡುಕ ಅಥವಾ ದಲ್ಲಾಳಿ ಪಾತ್ರದಲಿ ದತ್ತಣ್ಣ ನೆನಪಲ್ಲಿ ಉಳಿವ ಪಾತ್ರ ನಿರ್ವಹಿಸಿದ್ದಾರೆ. ಮತ್ತೆ ಮತ್ತೆ ಕಾಡುವ ಕಥಾ ವಸ್ತುವಿಗೆ ಸಂಗೀತ ಇಂಪಾದ ಹಾಡು, ಸನ್ನಿವೇಶಗಳಿಗೆ ತಕ್ಕದಾದ ಸಮುದ್ರ, ಬಂಡೆಗೆ ಅಪ್ಪಳಿಸುವ ಅಲೆಗಳು, ಮರಳ ರಾಶಿ, ನೀರಲ್ಲಿ ಸಾಗುವ ಒಂಟಿ ನಾವೆ, ಕೈಗೆಟಕದ ಕನಸಿನ ಸೌಧದಂತಿರುವ ವಾಸ್ತವಗಳು ಚಿತ್ರವನ್ನು ಬಿಗಿಗೊಳಿಸಿವೆ. ಒಂದೆರಡು ಸಂದರ್ಭದಲ್ಲಿ ಚಿತ್ರಕತೆಯ ಸಡಿಲತೆ ಕಂಡರೂ, ಬಡತನದ ವಸ್ತುವಿನ ಚಿತ್ರಕ್ಕೆ ಶ್ರೀಮಂತಿಕೆಯ ಅಬ್ಬರವೇನೂ ಇಲ್ಲ - ಎಲ್ಲವೂ ಮುತ್ತುಚ್ಚೇರದ ವಾಸ್ತವವೇ!

೩೦.೧೧.೨೦೦೦ - ಆರ್.ಜಿ. ಹಳ್ಳಿ ನಾಗರಾಜ್

## ಪತ್ರ  ಪತ್ರ  ಪತ್ರ

ಪ್ರಿಯರೆ,

ನಾನು ಹಿಂದೆ (ನೀವು ಸಂಪಾದಿಸಿದ) "ಗಿರೀಶ್ ಕಾರ್ನಾಡರ ಎಂಟು ರಂಗ ಪ್ರಯೋಗಗಳು" ಕೃತಿಯನ್ನು ಅಂಚೆಯಲ್ಲಿ ತರಿಸಿದ್ದೆ. ಅದು ಉತ್ತಮ ಪುಸ್ತಕ. ಗಿರೀಶ್‌ರ ನಾಟಕ ನೋಡಿದವರು ಓದಲೇಬೇಕಾದ್ದು.

ಈ ಸಾರಿಯು 'ಅನ್ವೇಷಣೆ' ತಲುಪಿದೆ. ಪಿ. ಲಂಕೇಶ್‌ರ ಬಗ್ಗೆ 'ಸೃಷ್ಟಿ'ಯಲ್ಲಿ ಚೆನ್ನಾಗಿಯೇ ಬರೆದಿದ್ದೀರಿ. ಸಾಹಿತ್ಯ ಲೋಕದಲ್ಲಿ ನಾನು ಮೆಚ್ಚಿಕೊಂಡ ವ್ಯಕ್ತಿ ಲಂಕೇಶ್.

'ಅನ್ವೇಷಣೆ' ನಿಯತಕಾಲಿಕವಾಗಿ ಬರಬೇಕಾದರೆ ಕಷ್ಟವಿದೆ. ಪತ್ರಿಕೋದ್ಯಮ ದೊಡ್ಡ ಸಾಗರ. ಅಲ್ಲಿ ನೀವು ಯಶಸ್ವಿಯಾಗಿರಿ ಎಂದು ಹಾರೈಸುವೆ. ಅನ್ವೇಷಣೆಗೆ ಚಂದಾ ಕಳುಹಿಸುವೆ - ಪತ್ರಿಕಾ ಲೋಕಕ್ಕೆ ನನ್ನ ಪುಟ್ಟ ಕಾಣಿಕೆ.

*ಆನೆಗುಂಡಿ ಮನೆ, ಬಂಟ್ವಾಳ - ೫೭೪೧೫೫* — **- ಎ. ರಾಧಾಕೃಷ್ಣ**

ಸರ್,

ನಮಸ್ಕಾರ. ಅನ್ವೇಷಣೆ ತಲುಪಿದೆ. ವರ್ಷದ ನಂತರ ಮತ್ತೆ ಪತ್ರಿಕೆ ನೋಡಿ ಸಂತಸಪಟ್ಟೆ. ಅರ್ಥಪೂರ್ಣ ಲೇಖನ ಕವಿತೆಗಳನ್ನು ಒಂದೆಡೆ ಕಲೆ ಹಾಕಿದ್ದೀರಿ. ಲೇಖಕರೊಬ್ಬರ ಸಂದರ್ಶನ ಪ್ರತಿ ಸಂಚಿಕೆಯಲ್ಲಿರಲಿ. ಜೊತೆಗೆ ಜಗಳದ ಧಾಟಿಯಲ್ಲಿರದ ಅರ್ಥಪೂರ್ಣ ಸಾಹಿತ್ಯಿಕ ಸಾಂಸ್ಕೃತಿಕ ಚರ್ಚೆಗಳಿಗೆ ಅವಕಾಶ ಮಾಡಿಕೊಡಿ. ಪತ್ರಿಕೆ ನಿರಂತರವಾಗಿ ಹೊರಬರಲಿ.

*ಗುಲಬರ್ಗಾ - ೫೮೫೧೦೬* — **- ವಿಕ್ರಮ ವಿಸಾಜಿ**

(ಇನ್ನೆರಡು ಪ್ರಮುಖ ಪತ್ರಗಳು ಪತ್ರಿಕೆಯ ಹೊರ ಹೊದಿಕೆಯಲ್ಲಿವೆ - ಸಂಪಾದಕ)

---

## FLASH EDITORIAL !

# ಧರ್ಮಾಂಧರ ನಾಡಲ್ಲಿ ಹಗಲು ಕತ್ತಲೆ

ಕರ್ನಾಟಕದ ಸಾಂಸ್ಕೃತಿಕ ಲೋಕದಲ್ಲಿ ಕಳೆದ ಕೆಲವಾರು ವರ್ಷಗಳಿಂದ ಮೂಲಭೂತವಾದಿ ಧೋರಣೆ ಹಾಗೂ ಪ್ರತಿಗಾಮಿ ಶಕ್ತಿಗಳು ಹೆಚ್ಚುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗಿದೆ. ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಬದುಕುತ್ತಿರುವ ನಾವು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಗೌರವಿಸುತ್ತೇವೆ ಅನ್ನುವವರೇ ಅರ್ಥವನ್ನು ಅನರ್ಥಗೊಳಿಸಿ, ಇದರ ಧಮನಕ್ರಿಯೆಗೆ ತೊಡಗಿರುವುದು ವಿಷಾದನೀಯ.

ಇದು ಎಚ್.ಎಸ್. ಶಿವಪ್ರಕಾಶರ ಮಹಾಚೈತ್ರ ನಾಟಕ ಕೃತಿಯ ಬಹಿಷ್ಕಾರದಿಂದ ಡಾ॥ ಪಿ.ವಿ. ನಾರಾಯಣರ ಧರ್ಮಕಾರಣ ಕೃತಿವರಗೆ ಹಬ್ಬಿ, ಈಗ ಅಖಿಲ ಭಾರತ (?) ಹೆಸರಿನ ವೀರಶೈವ ಮಹಾಸಭಾದವರ ಮತ್ತೊಂದು ಅತಿಗೆ ತಲುಪಿ; ಡಾ॥ ಎಂ. ಚಿದಾನಂದ ಮೂರ್ತಿ, ಡಾ॥ ಜಿ.ಎಸ್. ಶಿವರುದ್ರಪ್ಪ ಅವರಂಥ ಮಾನವೀಯ ವಿಚಾರವಂತರ ಧರ್ಮ ಬಹಿಷ್ಕಾರದವರೆಗೂ ಬಂದು ನಿಂತದ್ದು ಆತಂಕದ ಬೆಳವಣಿಗೆಯಾಗಿದೆ. ಇದು ಖಂಡನೀಯ.

ಕೆಮ್ಮಿದಕ್ಕೆ, ಕೊಸರಿದ್ದಕ್ಕೆಲ್ಲಾ ಬಹಿಷ್ಕಾರದ ಮಾತೆತ್ತಿ ಕತ್ತಿ ಝಳಪಿಸುವಲ್ಲಿ ಲಿಂಗಾಯ್ತ ಅರ್ಥಾತ್ ವೀರಶೈವ ಜನಾಂಗದ ಕೆಲವು ಹಿತಾಶಕ್ತಿಗಳು ಮುಂದಿರುವುದನ್ನು ಈಚಿನ ವರ್ಷಗಳ ಚರಿತ್ರೆ ದಾಖಲಿಸುತ್ತಿದೆ. ಸೃಜನಶೀಲ ಲೇಖಕರು ಚರಿತ್ರೆಯನ್ನು ದಾಖಲಿಸುವಾಗ ತಮ್ಮ ಅಭಿಪ್ರಾಯಗಳನ್ನು ತಡೆಹಿಡಿಯಬೇಕೆಂಬ ಒತ್ತಾಯ ಧರ್ಮಕಾರಣ ದ ವಿರುದ್ಧ ಪ್ರತಿಭಟಿಸಿದ ಬಸವದಳದ ಅನುಯಾಯಿಗಳಲ್ಲಿ ಬಲವಾಗಿ ಬೇರೂರಿತ್ತು. ಇದರ ಪ್ರತಿಫಲವೇ ಧರ್ಮಕಾರಣ ಕೋರ್ಟು ಮೆಟ್ಟಲು ಹತ್ತಿದ್ದು. ರಾಜಕಾರಣದ ಕುತಂತ್ರದಿಂದ ಕೃತಿ ಬಹಿಷ್ಕಾರಕ್ಕೆ ವೇದಿಕೆ ಸಜ್ಜು ಮಾಡಿದ್ದೂ ಈ ಬಸವದಳವೇ. ಪಿ.ವಿ. ನಾರಾಯಣರಿಗೆ ಕೊಟ್ಟ ಮಾನಸಿಕ ಹಿಂಸೆಯಿಂದಾಗಿ ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ತಿರಸ್ಕರಿಸಿ ಬಸವಾನುಯಾಯಿಗಳೆಂದು ಕರೆದುಕೊಳ್ಳುತ್ತಿರುವ ಕೆಲವು ಮತಾಂಧರು ಈಚೆಗೆ ರಕ್ತ ಪಿಪಾಸುಗಳಾಗಿ ಕತ್ತಿ ಝಳಪಿಸುತ್ತ ಸಂಘಟಿತರಾಗುತ್ತಿದ್ದಾರೆ ಎಂದು ಆಗ ನೊಂದು ನುಡಿದದ್ದು ನನಗಿನ್ನೂ ಚನ್ನಾಗಿ ನೆನಪಿದೆ.

ಬಸವದಳದ ಅಪಾಯಕಾರಿ ಹೆಜ್ಜೆಯ ಬಗ್ಗೆ ಹಿಂದೊಮ್ಮೆ ಬರೆದದ್ದೂ ನೆನಪಾಗುತ್ತಿದೆ - ಬಿಜೆಪಿಗೆ ಆರ್.ಎಸ್.ಎಸ್. ಹೇಗೆ ಮೂಲ ಬೇರೋ ಮಹಾದೇವಿಯ ಬಸವದಳವೆಂಬ ಖೊಟ್ಟಿ ಸಂಘಟನೆ ಕೂಡ ಈಕೆಯ ಮೆಂಟಲ್ ಕೂಸು. ಈ ಕೂಸು ಎಷ್ಟೇ ಔಷಧೋಪಚಾರಕ್ಕೂ ಗುಣಪಡಿಸಲಾಗದೇ ರೋಗಿಷ್ಟವಾಗಿದೆ. ಇದನ್ನು ಬದುಕಲು ಬಿಟ್ಟರೆ ಸಮಾಜದ ಸ್ವಾಸ್ಥ್ಯವೇ ಹಾಳಾಗುತ್ತದೆ. ಸಾಯಿಸಿದರೆ ರಕ್ತ ಬೀಜಾಸುರರರಂತೆ ಮಹಾದೇವಿ ಛೂ ಬಿಟ್ಟ ಸಂತಾನಗಳೇ ಎಲೆಲ್ಲೂ ಹುಟ್ಟಿಕೊಳ್ಳುತ್ತವೆ. ಬಸವದಳ ಮತ್ತೊಂದು ಕೋಮು ಸಂಘಟನೆ ಆಗುತ್ತಿರುವ ಬಗ್ಗೆ ಚಿತ್ರದುರ್ಗದ ಮುರುಘಾಮಠದ ಶಿವಮೂರ್ತಿ ಸ್ವಾಮಿಗಳು ಎಚ್ಚರಿಸಿದ್ದರು.

## FLASH EDITORIAL !

ಇಷ್ಟಾಗ್ಯೂ ಧರ್ಮದ ಹೆಸರಲ್ಲಿ, ಜಾತಿಯ ಹೆಸರಲ್ಲಿ ಮಹಾಸಭಾವಾಗಲಿ, ಬಸವದಳವಾಗಲಿ - ಇದರ ವಕ್ತಾರಳಾದ ಮಹಾದೇವಿ (ಮಾತೆ?) ಆಗಲಿ ಹೊರಟದ್ದಾರಿ ವಿಛಿದ್ರಕಾರಿ ಬೆಳವಣಿಗೆಯಾಗಿದೆ. ಚಿ. ಮೂ. ಹಾಗೂ ಜಿ.ಎಸ್.ಎಸ್. ಅವರನ್ನು ಧರ್ಮಬಹಿಷ್ಕಾರ ಹಾಕಿ ಬೆದರಿಕೆ ಹೊರಡಿಸಿರುವ ವಿಶ್ವನಾಥರೆಡ್ಡಿ ಮುದ್ನಾಳ್, ಭೀಮಣ್ಣ ಖಂಡ್ರೆ ಇವರ್ಯಾರೂ ವೀರಶೈವರ ಅಥವಾ ಲಿಂಗಾಯಿತರ ನಾಯಕರಲ್ಲ. ಇವರು ಇಂಥ ಆಜ್ಞೆ ಹೊರಡಿಸಿ ಖೊಮೇನಿಗಳಂತೆ ಧರ್ಮದ ಅಫೀಮಿನಲ್ಲಿ ತೇಲಾಡುವ ಸೋಗಲಾಡಿ ರಾಜಕಾರಣಿಗಳಾಗಿದ್ದಾರೆ. ಮುಗ್ಧ ಜನರನ್ನು ದಾರಿ ತಪ್ಪಿಸುವ ಇಂಥವರು ತಮ್ಮ ರಾಜಕೀಯ ಸ್ಥಾನಮಾನ ಭದ್ರಪಡಿಸಿಕೊಳ್ಳುವ ಹುನ್ನಾರಲ್ಲಿರುವವರು ಅನ್ನುವುದು ಸ್ಪಷ್ಟ.

ಧರ್ಮ ಬಹಿಷ್ಕಾರ ಅನ್ನುವುದು ತಮಾಷೆಯಾಗಿ ಕಾಣಿಸುತ್ತದೆ. ಮಹಾಸಭಾದವರು ಹೆಸರಿಸಿರುವ ಇಬ್ಬರು ವಿದ್ವಾಂಸರು ಧರ್ಮದ, ಜಾತಿಯ ಹೊರಗಿದ್ದಾರೋ, ಒಳಗಿದ್ದರೋ ಅನ್ನುವ ಅನುಮಾನ ಕಾಡಿದರೆ ಆಶ್ಚರ್ಯವಿಲ್ಲ. ಚಿ.ಮೂ. ಅವರೇನೋ ವೀರಶೈವರು ಹಿಂದೂಗಳೆಂದೇ ಒತ್ತಿ ಹೇಳಲು ಹೊರಟವರು. ಇದಕ್ಕೆ ಅವರದೇ ಆದ ಸಂಶೋಧನಾ ಮಾರ್ಗ ಇದೆ.ಹೀಗಾಗಿ ಉಪವಾಸ, ಧರಣಿಸತ್ಯಾಗ್ರಹ, ಮೌನ ಪ್ರತಿಭಟಣೆ ನಡೆಸಿ ಕರಪತ್ರ ಹೊರಡಿಸಿದ್ದಾರೆ. ಅವರ ಅಭಿವ್ಯಕ್ತಿ ಸ್ವಾತಂತ್ರ್ಯ ಪ್ರಶ್ನಿಸುವ ಹಕ್ಕು ನಮಗಿಲ್ಲ. ಜೊತೆಗೆ ಧರ್ಮ ಬಹಿಷ್ಕಾರದಂಥ ಉದ್ಧಟತನದ ಪ್ರದರ್ಶನವು ಸಲ್ಲ. ಇನ್ನು ಜಿ.ಎಸ್.ಎಸ್. ಈ ಹೇಳಿಕೆಯಲ್ಲಿ ಬಲಿಪಶು ಆಗಲು ಅವರ ಧರ್ಮಕಾರಣ ದ ಹಿಂದಿನ ಹೇಳಿಕೆಯೇ ಕಾರಣವೆಂದೂ ಭಾವಿಸಬಹುದು. ಆ ಸಂದರ್ಭದಲ್ಲೇ ಖಂಡ್ರೆ, ಮುದ್ನಾಳ್, ಮಹಾದೇವಿ (ಈಯಮ್ಮನ್ನ ಮಾತೇ ಎಂದು ಕರೆದರೆ ನನ್ನ ತಾಯಿಗೆ ಅವಮಾನಿಸಿದಂತೆ) ಅವರು ಫರ್ಮಾನು ಹೊರಡಿಸಿ ಧರ್ಮ ಬಹಿಷ್ಕಾರ ಹಾಕಿದ್ದರು. ಬಹುಶಃ ಈಗಿನ ಬಹಿಷ್ಕಾರವೂ ಸೇರಿದರೆ ಮೂರೋ ನಾಲ್ಕೋ ಆಗಿರಬಹುದು !.

ಜಿ.ಎಸ್.ಎಸ್. ಅವರು ಧರ್ಮಕಾರಣ ಕೃತಿಯನ್ನು ಧರ್ಮಾಂಧರು ಬಹಿಷ್ಕಾರ ಮಾಡಿದ ಸಂದರ್ಭದಲ್ಲಿ ಬರೆದ ಕವಿತೆಯೊಂದರ ಸಾಲು ಹೀಗಿದೆ :

**ಮಠದೊಳಗಿನ ಎಚ್ಚರದ ಗಂಟೆಯೂ ಮೂಕ !**

- ನಿಜ, ಬಹಿಷ್ಕಾರದಂಥ ಅನಿಷ್ಟ ಪರಂಪರೆಯನ್ನು ಸೃಷ್ಟಿಸಲು ಹೊರಟ ಮಹಾಸಭಾದವರಿಗೆ ಇದುರವರೆಗೂ ಯಾವುದೇ ಪ್ರಗತಿಪರ ಅಂದುಕೊಂಡ ಮಠಾಧಿಪತಿಗಳು ತರಾಟೆಗೆ ತೆಗೆದುಕೊಂಡ ಸುದ್ದಿ ಪ್ರಕಟವಾಗಿಲ್ಲ. ಕೆಲವು ಮಠಾಧಿಪತಿಗಳು ಬಾಯಿ ಬಿಡದೆ ಮೌನವಾಗಿದ್ದಷ್ಟು ಧರ್ಮದ ಅಫೀಮು ಕುಡಿದವರ ಹೇಳಿಕೆಗಳು ಸಮಾಜದ ಸ್ವಾಸ್ಥ್ಯ ಕೆಡಿಸುವ ಹಂತ ತಲುಪಬಹುದು. ಮುಂದಿನ ಪೀಳಿಗೆ ಹನ್ನೆರಡನೇ ಶತಮಾನದ ಮಾನವ ಧರ್ಮದ ಪರಿಕಲ್ಪನೆಯ ಬಗ್ಗೆ ಸಂಶಯ ತಾಳುವ ಆತಂಕ ನನ್ನೊಳಗಿದೆ.

ಬಸವಣ್ಣನ ಸಮಾಜವಾದ, ಅಲ್ಲಮನ ಅನುಭಾವ ಕಲ್ಪನೆ, ಅಕ್ಕಮಹಾದೇವಿಯ ಲೌಕಿಕ ಬದುಕಿನ ನಿರಾಕರಣೆ, ಕೆಳವರ್ಗದ ವಚನಕಾರರ ಸಮಾನತೆಯ ಪರಿಕಲ್ಪನೆ ಎಲ್ಲವೂ ಅರ್ಥಕಳೆದುಕೊಳ್ಳುವ ಆತಂಕವಿದೆ.

## FLASH EDITORIAL !

ಈ ಸಂದರ್ಭದಲ್ಲಿ ಒಂದೂವರೆ ದಶಕದ ಹಿಂದೆ ನಡೆದ ಒಂದು ಘಟನೆ ನೆನಪಿಗೆ ಬರುತ್ತದೆ. ಕವಿ, ಕಥೆಗಾರ ಮಿತ್ರ ಅಬ್ದುಲ್ ರಶೀದ್ ತನ್ನ ಉಮ್ಮಾಳಿಗೆ ಧರ್ಮಬಿಡುವ ಆತಂಕ ವ್ಯಕ್ತಪಡಿಸಿದ್ದ. ಇನ್ನೂ ಕಿರಿಯ ವಯಸ್ಸಿನ ಕವಿ ತುಂಬಾ ನೊಂದು ಈ ಮಾತು ಹೇಳಲು ಆತನಿಗಿದ್ದ ಆತಂಕ ಖೊಮೇನಿ ಹೊರಡಿಸಿದ್ದ ಸಲ್ಮಾನ್‌ರಷ್ದಿ ತಲೆ ತೆಗೆವ ಪಟ್ವ. **ಸೆಟಾನಿಕ್ ವರ್ಸಸ್** ಕೃತಿ ಬರೆದ ರಷ್ದಿ ಇರಾನ್‌ನ ಖೊಮೇನಿ ಎಂಬ ಧರ್ಮಾಂಧನ ಗುಡುಗಿಗೆ ಬೆದರಿ ಭೂಗತನಾಗಿದ್ದು ಇತಿಹಾಸ. ಈ ಕೃತಿಯನ್ನು ಬಹಿಷ್ಕರಿಸಿದ ಪ್ರಥಮ ದೇಶ ಭಾರತ ! ದೆಹಲಿಯ ಶಾಹಬುದ್ದೀನ್ ಮುಲ್ಲಾಗಳ ಧರ್ಮದ ಆಕ್ಟೋಪಸ್ ಹಿಡಿತ ಹೀಗೆ ಮಾಡುವಲ್ಲಿ ಯಶಸ್ವಿಯಾಗಿತ್ತು. ದೊಡ್ಡ ಪ್ರಜಾಪ್ರಭುತ್ವದ ಅಭಿವ್ಯಕ್ತಿ ಸ್ವಾತಂತ್ರ್ಯ ಹರಣಕ್ಕೆ ಮತ್ತೊಂದು ಕನ್ನಡಿಯಿದು. ಇಂಥಾ ಎಷ್ಟೋ ಕನ್ನಡಿಗಳು ವಿಕಾರ ಮುಖಗಳಾಗಿರುವುದರಿಂದಲೇ ಸೌಂದರ್ಯ ಪ್ರಜ್ಞೆ ಮರೆಮಾಚಿದೆ. ಮಾನವೀಯತೆ ನಶಿಸಿ ಹೋಗಿದೆ.

ಅಬ್ದುಲ್ ರಶೀದ್‌ರಂಥ ಹುಡುಗರಿಗೆ ಧರ್ಮ ಬಿಡುವುದು ಸುಲಭ ಹೌದೋ, ಅಲ್ಲವೋ -ಆದರೆ ಚಿ.ಮೂ., ಜಿ.ಎಸ್.ಎಸ್. ಅವರಂಥ ಜಾತ್ಯಾತೀತ ಹಿರಿಯರನ್ನು ಧರ್ಮ ಬಹಿಷ್ಕಾರ ಮಾಡುವ ಮಹಾಸಭಾ ನಾಯಕರನ್ನು ಏನನ್ನುವುದು? ಇವರನ್ನು ಎಲ್ಲಿ ನಿಲ್ಲಿಸಿ ಛೀಮಾರಿ ಹಾಕುವುದು?

ರಶೀದ್ ತನ್ನ ಉಮ್ಮಾಳಿಗೆ ಅಂದು ಹೇಳಿದ್ದ ಹಿನ್ನೆಲೆಯಲ್ಲಿ ನಾನೊಂದು **ಹಗಲು ಕತ್ತಲೆಯ ನಾಡು** ಕವನ ಬರೆದಿದ್ದೆ. ಅಲ್ಲಿ,

**ಧರ್ಮ ಬಿಡುವವನ ನಾಡಲ್ಲಿ**

**ಹಗಲು ಕತ್ತಲೆ**

ಎಂಬ ಸಾಲಿನ ಜೊತೆ ಕೊನೆಗೆ ಹೇಳಿದ ಸಾಲುಗಳನ್ನು ಇಲ್ಲಿ ಪುನಃ ಉದ್ಧರಿಸಿ; ಇದು ಚಿ.ಮೂ., ಜಿ.ಎಸ್.ಎಸ್. ಅವರ ಸಂದರ್ಭಕ್ಕೂ ಅನ್ವಯಿಸುತ್ತದೆಂದು ಹೇಳಲಿಚ್ಛಿಸುತ್ತೇನೆ

**ಸತ್ಯದ ಕಹಿ ಕಟುವಿನಲ್ಲಿ**
**ತಿರುಗುವ ಚಕ್ರಕ್ಕೆ**
**ನಾನು**
**ತಲೆ ಕೊಟ್ಟು ಹುಚ್ಚನಾಗಿಲ್ಲ**
**ಹಗಲು ಸೂರ್ಯನಿಗೆ ಹುಡುಕುತ್ತಿದ್ದೇನೆ**
**ಸಿಕ್ಕರೆ ನನಗಷ್ಟು ಬೆಳಕು ಹಂಚುವಿರಾ?**
(ಕಡಗೋಲು - ೧೯೮೫, ಪುಟ ೫೧ - ೫೨)

ದಿ. ೧೫-೧೨-೨೦೦೦

- ಆರ್.ಜಿ. ಹಳ್ಳಿ ನಾಗರಾಜ್
ಸಂಪಾದಕ, ಅನ್ವೇಷಣೆ.

# ಶೋಭೆ ತರುವುದಿಲ್ಲ

ಮಾನ್ಯರೆ,

ಪ್ರೊ. ಎಂ. ಚಿದಾನಂದಮೂರ್ತಿ ಮತ್ತು ಪ್ರೊ. ಜಿ.ಎಸ್. ಶಿವರುದ್ರಪ್ಪ ಅವರನ್ನು ಅಖಿಲ ಭಾರತ ವೀರಶೈವ ಮಹಾಸಭೆ ಧರ್ಮ ಬಹಿಷ್ಕೃತರನ್ನಾಗಿ ಮಾಡಲಾಗುವುದೆಂದು ಶರಣ ವಿಶ್ವನಾಥರೆಡ್ಡಿ ಮುದ್ನಾಳ್ ಅವರ ಪತ್ರಿಕಾ ಹೇಳಿಕೆ ದಿನಾಂಕ ೧೧ರ ಪ್ರಜಾವಾಣಿಯಲ್ಲಿ ಪ್ರಕಟವಾಗಿದೆ.

ಇಡೀ ಜಗತ್ತಿನಲ್ಲೇ ಯಾವ ಕಾಲಘಟ್ಟದಲ್ಲೂ ಆಗದಿರುವಂತಹದೊಂದು ವಿನೂತನ, ಅತ್ಯಂತ ಪ್ರಗತಿಶೀಲ, ಉದಾರ ಮಾನವತಾವಾದಿ ಸಾಮಾಜಿಕ ಚಳವಳಿಗೆ ಇಂಬುಕೊಟ್ಟ ಹನ್ನೆರಡನೇ ಶತಮಾನದ ಬಸವಣ್ಣನವರ ನೇತೃತ್ವದಲ್ಲಿ ಸಂಭವಿಸಿದ ಜನ ಜಾಗೃತಿಯು ಮತ್ತೆ ನಡೆದಿಲ್ಲ. ಇದು ಸಮಾಜದ ಎಲ್ಲಾ ಸ್ತರಗಳ ಎಲ್ಲಾ ಬಗೆಯ ವೃತ್ತಿ ನಿರತರನ್ನು ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಕಟ್ಟುಕಟ್ಟಳೆಗಳಿಂದ ಮುಕ್ತರನ್ನಾಗಿಸಿದೆ. ಚಮ್ಮಾರ, ಕಮ್ಮಾರ, ಕುಂಬಾರ, ವೇಶ್ಯೆಯರಾದಿಯಾಗಿ ಎಲ್ಲರನ್ನೂ ಮುಕ್ತ ಹೃದಯದಿಂದ ತನ್ನ ತೆಕ್ಕೆಗೆ ಬಾಚಿ ತಬ್ಬಿಕೊಂಡು ಸ್ವಾಭಿಮಾನವನ್ನು ಕಲಿಸಿದೆ. ತಬ್ಬಿಕೊಂಡು ಸ್ವಾಭಿಮಾನವನ್ನು ಕಲಿಸಿದೆ.

ಕಾಯಕವೇ ಕೈಲಾಸ ಎಂಬ ದೀಕ್ಷೆಯನ್ನು ಕೊಟ್ಟು ಸಾವಿರಾರು ಸಾಮಾಜಿಕ ಬಹಿಷ್ಕೃತ ಜನಸಮುದಾಯವನ್ನು ಉದ್ಧರಿಸಿದ ಒಂದು ಮಹಾನ್ ಧರ್ಮವಾಗಿ ರೂಪುಗೊಂಡಿದೆ. ಈ ಹೊತ್ತಿಗೆ ಅನೇಕ ಕೀಳರಿಮೆಗಳಿಂದ ನರಳುತ್ತಿರುವ ಜನರನ್ನು ಕೆಲವು ಲಿಂಗಾಯತ ಮಠಗಳು ಲಿಂಗ ದೀಕ್ಷೆಯನ್ನಷ್ಟೇ ನೀಡದೆ ಅವರನ್ನು ಸಾಮಾಜಿಕ ಹಾಗೂ ಶೈಕ್ಷಣಿಕ ಮುಖ್ಯ ವಾಹಿನಿಗೆ ತರುತ್ತಿರುವ ಮಹಾನ್ ಕಾರ್ಯದಲ್ಲಿ ತೊಡಗಿವೆ. ವಸ್ತುಸ್ಥಿತಿ ಹೀಗಿರುವಾಗ ಧಾರ್ಮಿಕ ಬಹಿಷ್ಕಾರವೆಂಬ ಮಾತು ಯಾವ ಧರ್ಮಕ್ಕೂ ಶೋಭೆ ತರುವುದಿಲ್ಲ ಎಂಬುದನ್ನು ನಾವು ಮನಗಾಣಬೇಕಾಗಿದೆ.

ಇಷ್ಟಕ್ಕೂ ಪ್ರೊ. ಚಿ.ಮೂ. ಮತ್ತು ಪ್ರೊ. ಜಿ.ಎಸ್.ಎಸ್. ಇವರು ತಮ್ಮ ಜೀವನದುದ್ದಕ್ಕೂ ಜಾತಿ ಮತ್ತು ಧರ್ಮಾತೀತ ನಿಲುವನ್ನೇ ತಳೆದು, ಸಾವಿರಾರು ವಿದ್ಯಾರ್ಥಿಗಳು ಮತ್ತು ಸಾಮಾಜಿಕ ಕಳಕಳಿ ಉಳ್ಳಂಥವರಿಗೆ ಪ್ರೇರಣೆ ನೀಡಿದ್ದಾರೆ. ಶರಣ ವಿಶ್ವನಾಥ ರೆಡ್ಡಿ ಮುದ್ನಾಳ ಅವರು ತಮ್ಮ ಹೇಳಿಕೆಯನ್ನು ದಯಮಾಡಿ ಮರುಪರಿಶೀಲಿಸಿ ಹಿಂತೆಗೆದುಕೊಳ್ಳುವುದು ಶರಣ ಧರ್ಮಕ್ಕೆ ಅನುಗುಣವಾಗಿರುತ್ತದೆ ಎಂಬುದು ನಮ್ಮ ನಂಬಿಕೆ.

ಬೆಂಗಳೂರು

ದಿ. ೧೪.೧೨.೨೦೦೦

- ಅಗ್ರಹಾರ ಕೃಷ್ಣಮೂರ್ತಿ
- ಮಲ್ಲೇಪುರಂ ಜಿ. ವೆಂಕಟೇಶ್
- ಕರೀಗೌಡ ಬೀಚನಹಳ್ಳಿ,
- ಮಂಗ್ಳೂರು ವಿಜಯ, ಅಲಿಬಾಬಾ

# ನವರಾತ್ರಿಯ ಮಳೆ

- ನಜೀರ್ ಚಂದಾವರ



ಬಂದೆಯಾ ಬಾ ಒಳಗೆ
ಚಪ್ಪಲಿ ಅಲ್ಲೇ ಬಿಟ್ಟು
ಬಕೇಟಿನಲ್ಲಿ ನೀರಿದೆ
ಸುರಿದುಕೋ ಕಾಲಿಗೆ ಮೆತ್ತಿದೆ ಕೆಸರು
ಕದವಿಲ್ಲದ ಚೌಕಟ್ಟಿಗೆ
ಪರದೆಯಾಗಿ ಬಿಟ್ಟ ಗೋಣಿಚೀಲ
ಮೇಲೆತ್ತಿ ಒಳ ಬಾ

* * *

ಅಲ್ಲಿ ಆ ಮೂಲೆಗೆ
ಬೆತ್ತದ ಕುರ್ಚಿಯಿದೆ ನನ್ನ ತಾಯಿಯುದು
ಧೂಳು ಕೊಡವಿ ಕೂತುಕೋ
ತುಂಬಾ ಹಳೆಯದು ನನ್ನಷ್ಟೇ ವಯಸ್ಸು
ತಿಗಣೆ ಇಲ್ಲ ಅದೇ ಸಮಾಧಾನ
ಸೊಳ್ಳೆಗಳೋ ಅಲ್ಲಲ್ಲಿ ಒಂದಿಷ್ಟು
ಕಸದ ಗುಪ್ಪೆ ಎತ್ತಲಿಲ್ಲ ಮುನ್ಸಿಪಾಲ್ಟಿ - ಕಾರಣ
ಹಾಗೇ ಕೈಯ ಬೀಸು

* * *

ಹೇಳು ಹ್ಯಾಗಿದೆ ಈ ಸಲ
ನವರಾತ್ರಿಗೆ ಮಳೆ
ಗುಡುಗೋ ಆ ಮಿಂಚೋ
ಎಲ್ಲಿ ಹಾರಿತು ಉರಿದು

* * *



ನಡೆ ಬಚ್ಚಲಿಗೆ ಸುರಿದುಕೋ ತಲೆಗೆ
ಹಂಡೆ ತುಂಬ ಬಿಸಿ ನೀರಿದೆ
ಹಗಲುದ್ದ ಬಿಸಿಲು - ಸೆಕೆ, ಸಂಜೆ
ಆರಕ್ಕೆ ಕಾಯುವ ಮಳೆ

ಮೈತುಂಬ ಕೆಸರು - ಬೆವರು ಗಬ್ಬು ವಾಸನೆ
ಟವಲು ಅಲ್ಲಿದೆ ಗೋಡೆಗೆ ಜಡಿದ ಮೊಳೆಗೆ
ಬೇಗನೇ ಮುಗಿಸಿ ಬಾ
ಬಿಸಿ ಗಂಜಿಯಿದೆ ಕುಚಗಿ ಅಕ್ಕಿಯದು

* * *



ದೀಪಾವಳಿ ಇನ್ನೇನು ಬಂತು
ನಾಳೆ ಅನ್ನುವುದರೊಳಗೆ
ಹಣತೆಗೆ ಎಣ್ಣೆ ಬೇಕು
ಮೇಣಬತ್ತಿ ತಂದರೆ ಸಾಕೇ
ಕತ್ತಲೆಗೆ ದೂಡದಿರಲಿ ಈ ಸಲದ ಮಳೆ
ಮಿಂಚು ಬಡೆದಿದೆಯಲ್ಲ ಡಿಸೇಲ್‌ಗೆ
ಬೆಳಕಿನ ಗುರುತು ಕೂಡ
ಈ ಸಲ ದುಬಾರಿ

* * *

ಬಂದೆಯಾ ಬಾ
ಇದ್ದದೇ ಈ ಗೋಳು
ವರ್ಷ ವರ್ಷಕ್ಕೂ ಒಂದೊಂದು
ನವರಾತ್ರಿಗೆ ಬಂದ ಮಳೆ-
ಗೆ ಮರಿಕಪ್ಪೆಗಳ ಸಾಲು ಹಿಂಡು
ಮಿಣು ಮಿಣುಕಲಿ ಮಿಂಚುಳ್ಳಿಗಳು -
ಅದರೊಂದಿಗೆ ಹಾಡಲಿ ಜೀರುಂಡೆಗಳು

* * *

ಬಂದಿದ್ದಿಯಲ್ಲಾ ಬಾ
ಎರಡು ಹೆಜ್ಜೆ ಹಾಕು
ಅಲ್ಲಿ ಅಡ್ಡ ಕಟ್ಟಿದ
ತಟ್ಟಿ ಕಿತ್ತು ಹಾಕು
ಕತ್ತಲೆಯುದ್ದ ದಾರಿಗೆ
ಹಚ್ಚ ಬೇಕಿದೆ ಬೆಳಕಿನ ಸಾಲು
ನಡಗುವ ಕೈಯಲ್ಲಿ
ಚಳಿಗೆ ಮುಖ ಕೊಟ್ಟು.

* * *



# ಮುತ್ತು ಕೊಂಡಳು ರಾಧೆ

- ಶಂಕರ ಕಟಗಿ



ಕಲೆ: ಎಂ. ಬಿ. ಪಾಟೀಲ್

ಮುತ್ತುಗದ ಹೂ ಹಡದಿ ನಂದಗೋಕುಲದ ಹಾದಿ
ಘಮಘಮಿಸು ವಾಸನೆಗೆ ಮೈಯ್ಯೊಡ್ಡಿ... ಮನಸ್ಸೊಡ್ಡಿ...
ಚಟಾರನೆ ಕಣ್ಣೆಹರಿದ ಕುರುವಿನಂತೆ ವಠಾರದಿಂದೀಚೆ ಬಂದೆ

ಎಳೆ ಬಿಸಿಲ ಹೊಳೆ ಇತ್ತು ಗೋಕುಲದ ಬಯಲಲ್ಲಿ
ಗೋಪಿ ಹೆಂಗಸರ ಸಡಗರದ ಮೆಳೆ ಇತ್ತು

ಕವಿದ ಕೌತುಕದೊಳಗೆ ಮಾತಿನ ಗಿಣಿ ಬಂದು
ಮಿತವಾಗಿ ನುಡಿದಿತ್ತು ಸ್ಫಟಿಕದಂಥಾ ಮಾತ;
'ಮುತ್ತಿನ ದೇವರು ಮುತ್ತ ಮಾರುತ ಬಂದ...'

ಸಾರಿಸಿದೆ ಮನೆಯಂಗಳ ಎದೆ ದುಗುಡ ಕಲೆಸಿ
ಕನಸ ರಂಗೋಲಿ ಬರೆದು, ಪುಳಕ ತೋರಣ ಕಟ್ಟಿದೆ
ಚಿತ್ತವನೆ ಬತ್ತಿ ಹೊಸೆದು ದೀವಿಗೆ ಹೊತ್ತಿಸಿ ಕಾದೆ

ಕಡೆಗೂ ಬಂದ...
ಕಡಲ ಕೊಪರಿಗೆ ಮುತ್ತ ಕದ್ದು ಮಾರುವ ಜೋಗಿ
ತುಟಿ ಅಂಚಿಗೆ ಚಟಿಕೆ ನಗು ತಂದು ಕೇಳಿದನು;
'ಮುತ್ತು ಬೇಕೇ ಗೋಪಿ ಕಡಲ ಕುದಿತದ ಕಾಳು?'



ಎಕ್ಕದ ಕಾಯಿ ಸಿಡಿದ ಹಾಗೆ ಹಾಸ್ಯಮಾಡಿ
ನಗಬಹುದೇ ಮಿಡಿ ಮಾವು ಗೋಪಿಯರು
ಜೋಗಿ ಮಾತಿನ ಮಡುವು ಕಲಕಿ...

ನತ್ತು ವಾಲೆಗೆ ಮುತ್ತಿಲ್ಲ
ಇಲ್ಲ ಹವಳಮಣಿ ಕತ್ತಿನ ಚಂದ್ರಹಾರಕೆ
ತುಂಬಿದೀ ತುರುಬಿಗೆ ಗೊಂಡೆ ಗಜ್ಜರವಿಲ್ಲ
ಬೇಕೆಂದು ಹೇಳುವುದು ಹೇಗೆ? ಕೈಯಲ್ಲಿ ಕಾಸಿಲ್ಲ

ಮಾತನಾಡಲೇ ಇಲ್ಲ ಮೈಕಂಪನಕೆ ಬೆದರಿ ನಾನು...

ಜೋಳಿಗೆಯಿಂದ ಜೋಗಿ
ತಾನೇ ಮುತ್ತಿನ ಗೊಂಡೆ ತೆಗೆದ



ನೀಡಿದನು ಏದುಸಿರಿಗೆ ಜಾತ ಮುತ್ತಿನ ಉಸಿರ
ನವಿಲುಗರಿ ನೆಟ್ಟ, ತೇರು ತುರುಬಿನ ತೆರೆಗೆ

ನವಿಲಾದೆ ನಾನು, ನಾದವಾದನು ಅವನು...

# ರಿಲ್ಕ್‌ನ ಎಲಜಿಯ ಒಂದು ತುಂಡು

ಅನುವಾದ : **ಅಬ್ದುಲ್ ರಶೀದ್**

ಕೂಗಿ ಕರೆದರೆ ಕೇಳುವರು ಯಾರು ದೇವದೇವತೆಗಳ ಸಾಲಿನಲ್ಲಿ
ಒಬ್ಬನಾದರೂ ಒತ್ತಿಕೊಂಡರೆ ಎದೆಗೆ ತೀರಿ ಹೋಗುವೆನು
ಆ ತುಂಬು ಇರುವಿನಲ್ಲಿ. ಚೆಲುವೆಂಬುದು ಅಲ್ಲ ಬೇರೇನೂ
ಅದು ಭಯದ ತೊಡಗು. ಕೇವಲ ತಾಳಿಕೊಳ್ಳಬಲ್ಲೆವು ಮಾತ್ರ ಅದನು.
ಚಕಿತರಾಗುವೆವು ಅಷ್ಟು. ತಣ್ಣಗೆ ಸಂಚಲ್ಲಿ ತೊಡುಗುವುದು ಅದು
ಮುಗಿಸಿ ಬಿಡಲು ನಮ್ಮನು. ಪ್ರತಿ ದೇವತೆಯೂ ಭಯವ ಹುಟ್ಟಿಸುವುದು.
ತಡೆ ಹಿಡಿದು ನುಂಗಿಕೊಳ್ಳುವೆನು ಅಳಲ, ಇರುಳ ಅಳುವ
ಅಯ್ಯೋ ಯಾರ ಕಡೆಗೆ ತಿರುಗುವುದು ಬೇಕುಗಳಿಗೆಲ್ಲ
ದೇವತೆಗಳಲ್ಲ, ನರಮನುಜರಲ್ಲ
ಈಗಾಗಲೇ ಅರಿತಿರುವ ಮೃಗಗಳಿಗೂ ತಿಳಿದಿರುವುದು
ನಾವು ಸರಿಯಾಗಿಲ್ಲ ಈ ಆಖ್ಯಾನಿತ ಲೋಕದಲ್ಲಿ
ಇರಬಹುದು ಅಲ್ಲಿ ಉಳಿದಿರಬಹುದು
ಒಂದು ಮರ ಮರೆಯ ತುದಿಯಲ್ಲಿ ದಿನವೂ
ಕಣ್ಣಲ್ಲಿ ತುಂಬಿಕೊಳ್ಳಲಿಕ್ಕೆ. ಉಳಿದಿರಬಹುದು ನಿನ್ನೆಯದಾರಿ
ಎಂದಿನ ಹಾಗಿನ ಒಂದು ಸಲೀಸಿನ ಹಾದಿ
ನಮ್ಮಲ್ಲಿ ಉಳಿದದ್ದು ಜೊತೆ ಸೇರಿದ್ದು ಎಂದೂ ಹೊರಟು ಹೋಗದ್ದು.
ಇರುಳು - ಈ ಕತ್ತಲ ಗಾಳಿ ಅನಂತ ಆಕಾಶದಷ್ಟು
ಮುಖಕ್ಕೆ ರಾಚುವುದು. ಉಳಿವುದಿಲ್ಲ ಯಾರಿಗೆ
ಇದು ಬಹಳಷ್ಟು ಬಯಸಿ ಹುಚ್ಚು ಹಿಡಿಸುವುದು
ಒಂಟಿ ಎದೆ ನೋವಲ್ಲಿ ಕೂಡುವುದು ಇದನು
ಕಡಿಮೆಯೇನಲ್ಲ ಪ್ರೇಮಿಗಳಿಗೆ ಈಕಷ್ಟ
ಅವರು ಬಳಸಿಕೊಳ್ಳುವರು ಒಬ್ಬರನೊಬ್ಬರು ತಮ್ಮ ವಿಧಿಯನ್ನು ಅಡಗಿಸಿಕೊಳಲಿಕ್ಕೆ
ಇದು ಗೊತ್ತಿಲ್ಲವೇ ನಿನಗೆ ಬೀಸಿ ಒಗೆದು ಬಿಡು ಖಾಲಿತನವ
ತೋಳುಗಳಿಂದ ಉಸಿರಿನ ಹೊರಕ್ಕೆ. ಬಹುಶಃ
ಹಕ್ಕಿಗಳು ಅರಿಯಬಹುದು ಗಾಳಿ ಬಾರದಾಗಿರುವುದ
ಇನ್ನಷ್ಟು ಲಗು ಬಗೆಯಿಂದ ಹಾರಬಹುದು

*(ಅವಳನ್ನು ಸೇರಿಸಲು ಜಾಗವೆಲ್ಲಿದೆ ನಿನ್ನಲ್ಲಿ. ಆ ಎಲ್ಲ ಭಾರಭಾರದ ಯೋಚನೆಗಳು ನಿನ್ನೊಳಗೆ ಹೋಗಿ ಬಂದು ಕೆಲವೊಮ್ಮೆ ಇರುಳೆಲ್ಲಾ ಅಲ್ಲೇ ಉಳಿದು)*

# ಹರಿವ ನೆರಳ ಬೆನ್ನೇರಿ

- ಮುಳ್ಳೂರು ನಾಗರಾಜ



ಅಗ್ನಿ ಪರ್ವತಗಳ ಎದೆಯಲ್ಲಿ
ಹರಳುಗಟ್ಟಿದೆ ಕವಿತೆ
ನೋವು ತುಂಬಿದೆ
ಅಲ್ಲಿ ಎಲ್ಲ ಮೂಕ !

ಅಧೋಲೋಕದ ಹಕ್ಕಿಯ ಕಂಗಳಲ್ಲಿ
ನಗುತ್ತಿದೆ ಬೆಂಕಿಗೋಲ ಜನರೆದೆಯ
ಕುಲುಮೆಯಲ್ಲಿ ಚಿಗುರಿದೆ ಮಹಾಪ್ರಲಯ

ಕತ್ತಲೆಯ ಇತಿಹಾಸ ಚಕ್ರದ ಕೈ ಕಾಲು
ತಳಕೊಂದು ತೆವಳಿದೆ
ದಿಕ್ಕೂ ಸಿಕ್ಕದ ಬೆಂಕಿ ಹಕ್ಕಿ ಮರಿಯಾಗಿದೆ
ಚಿಕ್ಕೆ ಚಂದಿರರ ನಡುವೆ
ತೂಗುಯ್ಯಾಲೆಯಾಡಿದೆ ಭೂಮಿ !

ಎದೆಯ ಹಾಡುಗಳು ಸಿಡಿದು
ಹೆಬ್ಬುಲಿ ಕೂಡಾ ತಬ್ಬಲಿ

ಸೋತವರು ನೆನಪಿಗೆ
ಗೆದ್ದವರ ತಲೆಗಳು
ಕಾಲದಂಡವ ಮುಟ್ಟಿವೆ !

ತಲೆಯಿಂದ ತಲೆಗೆ ತಲೆಮಾರು ಚಲಿಸಿ
ಇದೋ ನಿಂತಿದೆ ಗೂಢ ಬದುಕಿನ ದಾಖಲೆ
ಮಗಳು ಸೂಳೆ ಅಪ್ಪ ವಿಟ
ಮಕ್ಕಳು ಗೂಡಿಲ್ಲದ ಹಕ್ಕಿಗಳು
ಸಾವಿನಕ್ಕರೆ ಬೆಳೆಯುತಿದೆ ಗೋಲಾಕಾರ



ಜೀವ ಜೀವಗಳು ಚಲಿಸಿವೆ
ಹರಿವ ನೆರಳ ಬೆನ್ನೇರಿ
ಕಾಲದ ಕಡತೂಸು ಹೊಕ್ಕಿದೆ
ಚರಿತ್ರೆಯ ಎದೆಗೆ
ನೆರಳು ಸಜ್ಜಾಗುತ್ತಿದೆ
ನರರ ವಧೆಗೆ !

# ಬಿಡುಗಡೆಯ ಹಾಡು

- ಮುದೇನೂರ ಸಂಗಣ್ಣ



೧. ಹಂಗಿನರಮನೆಯ ಮುಳ್ಳಿನೀ ಪಂಜರದಲ್ಲಿ
ರೆಕ್ಕೆಗಳ ಬಿಗಿ ಹಿಡಿದು ನರಳುತಿದೆ ಹಕ್ಕಿ,
ಕದ ಮುರಿದು ಹೊರಬಂದು ಬಾನಾಡಿಯಾಗುತ್ತ
ವಿಹರಿಸಲಿ ಹರ್ಷಿಸಲಿ ಹಿಗ್ಗಿನೊಳು ಸೊಕ್ಕಿ

೨. ಮಡುಗಟ್ಟಿ ನಿಲ್ಲಿಸಿದ ನೀರು ತಾ ಕೊಳೆಗೊಂಡು
ಚಡಪಡಿಸುತಿದೆ ಮುನ್ನಡೆವ ಹಾದಿ ಹುಡುಕಿ
ಹಸಿದ ನೆಲವನು ತಣಿಸಿ ಹಸಿರು ವಸನವನುಡಿಸಿ
ಅಡೆತಡೆಯ ಗೋಡೆಗಳ ಕೆಡಹಲ್ಕೆ ದುಡುಕಿ

೩. ಸುತ್ತಿಟ್ಟು ಮೃಗರಾಜ ಹತ್ತಡಿಯ ಹದ್ದಿನೊಳು
ಗೊಣಗುತಿಹ - "ಇನ್ನು ಈ ಬಂಧನ ಸಾಕು"
ಕನಲಿ ಕೆಂಗಿಡಿಯುಗುಳಿ ಪಂಜಗಳನೆತ್ತುತಿಹ -
"ಸೆರೆಯಿಂದ ನಾ ಜಿಗಿದು ಸದರೇರಬೇಕು"

೪. ರವಿಕಿರಣಗಳ ಸೆರೆಯೊಳಡಗಿಸಿಹ ಕಾರಿರುಳೆ
ಹೊರ ಬಿಡು, ದೂರ ಸರಿ ಹರಡಲೀ ಬೆಳಕು;
ತೊಳೆದು ಹೋಗಲಿ ಸಕಲ ಮೈ ಮನದ ಕೊಳಕುಗಳು -
ಒಳ - ಹೊರಗು ತಿಳಿನೀರ ಮಳೆ ಸುರಿಯಬೇಕು

೫. ಪ್ರಾಣ ಪಣಕಿಟ್ಟಿಹೆವು - ಸಿಡಿಲ ಮರಿಗಳು ನಾವು
ಪ್ರಳಯ ರುದ್ರರೆ ಹೌದು - ಭಾರತಿಯ ಆಣೆ,
ಇನ್ನು ನಿನಗುಳಿಗಾಲವಿಲ್ಲಿಲ್ಲ ನೀ - ತೊಲಗು
ಇನ್ನಲ್ಲ ನೀನೇಳು ಕಡಲುಗಳ ರಾಣಿ

೬. ಜಾತಿ ಮತ ಪಂಥಗಳ ಹುಟ್ಟುರುಹಿ ಮನುಜಮತ
ಮೆರೆಸುವೆವು - ಮೂರು ಬಣ್ಣದ ಗುಡಿಯ ಹಿಡಿದು,
ಸರ್ವರಿಗು ಸಮನಾವು, ಮನದುಂಬಿ ದನಿಯೆತ್ತಿ
ಹಾಡುವೆವು ಬಿಡುಗಡೆಯ ಒಕ್ಕೊರಲ ಹಾಡು

೧೯೪೫

(ಮುದೇನೂರು ಸಂಗಣ್ಣ ನಮ್ಮ ನಡುವಿನ ಹಿರಿಯ ಸಾಂಸ್ಕೃತಿಕ ಜೀವ. ಈಚೆಗೆ ಲೋಹಿಯಾ ಪ್ರಕಾಶನ ಅವರ ೫೫ ವರ್ಷಗಳ ಕಾವ್ಯ ಕೃಷಿಯ ಪ್ರಥಮ ಸಂಕಲನ ಆ ಅಜ್ಜ ಈ ಮೊಮ್ಮಗ ಪ್ರಕಟಿಸಿದೆ. ಸ್ವಾತಂತ್ರ್ಯ ಪೂರ್ವದ ಕವಿಯ ಭಾವನೆಯನ್ನು ನಮ್ಮೆಲ್ಲ ಓದುಗರಿಗೆ ಮತ್ತೆ ನೀಡುತ್ತಿದ್ದೇವೆ. ಸಂ.)

# ನದಿ

ಮೂಲ : ಮಂಗಲ್ ರಾಠೋಡ್ ಅನು : ಸರಜೂ ಕಾಟ್ಕರ್

ರೊಜ್ಜಿನಲ್ಲಿ ಸಿಕ್ಕುಗೊಂಡ ಹಡಗಿನ ಕೂವೆ ಕಂಬದ ಮೇಲೆ
ಕಪ್ಪು ಬಣ್ಣ ಬಂದು ಕೂತಿತ್ತು
ಬಿಳಿ ಬಣ್ಣದ್ದೊಂದು ಕಲೆ
ಹಸಿರು ಹಸಿರಾದ ನದಿಪಾತ್ರದಿಂದ ಹಾರಿ ಹೋಯಿತು

ರೆಂಬೆ ಕೊಂಬೆಗಳಲಿ ಎಂದಿನಿಂದಲೂ ಅಳಿಲುಗಳು ತಮ್ಮದೇ
ಚಂಚಲತೆಯನು ಹಿಡಿದಿಡಲು ಆಟವಾಡುತ್ತಿದ್ದವು

ಶತಶತಮಾನಗಳಿಂದ ಸಂಜೆಯ ಖುರ್ಚಿಗಳನ್ನು ಸಿಂಗರಿಸಲಾಗಿತ್ತು
ಯಾರಿರಬಹುದು ಬರುವವನು?

ಈ ಪ್ರಶ್ನೆಗಳಿಂದ ಸೇತುವೆಗಳು ಮುರಿದು ಬೀಳುತ್ತಿವೆ
ಅದರ ಮೇಲೆ ಡಬಲ್ ಡೆಕ್ಕರ್ ತರಹ ಎರಡು ನಗರಗಳು

ಯಾವುದೋ ಒಂದು ಕ್ಷಣ ಪರಸ್ಪರ ಮೂಸಿ ಮತ್ತೆ ಅಗಲುತ್ತವೆ
ಆಕಳಿಕೆ ಕ್ಷಿತಿಜಿಗೆ ಡಿಕ್ಕಿ ಹೊಡೆದು ಮತ್ತೆ ವಾಪಸ್ಸಾಗುತ್ತಿವೆ

ಕಣ್ಣುರೆಪ್ಪೆಯಿಂದ ಕೆಳಗುರುಳುವ ಒಂದೊಂದು ದೃಶ್ಯಗಳು
ಒಮ್ಮಿಂದೊಮ್ಮೆಲೆ, ತಿರುಗಿ ನೋಡಿದಾಗ-
ಎದುರಿನ ಗಾಜಿನ ಖಿಡಕಿಯಲಿ ಹರಿಯುವ ನದಿ
ಕುದಿಯುತ್ತಿದೆ.....

ಇಡೀ ಈ ನನ್ನ ಪ್ರೀತಿಯ ನದಿ ಕುದಿಯುತ್ತಿದೆ

ನಾನು ನೋಡುತ್ತೇನೆ. ಕೇವಲ ನೋಡುತ್ತೇನೆ
ದಣಿವಾಗಿ ವಾಪಸ್ ಬಂದ ನನ್ನ ನಜರಿಗೆ
ಟೇಬಲ್ ಮೇಲೆ ಬಿದ್ದಿರುವ
ನನ್ನವೇ ಈ ಶಬ್ದಗಳು ಈಗ ಕಾಣಿಸುತ್ತಿಲ್ಲ
ಆಕಾಶದೆಡೆಗೆ ನೋಡುತ್ತೇನೆ:
ಮೋಡಗಳೆಲ್ಲ ನದಿಯಲ್ಲಿ ಹರಿದು ಹೋಗಿವೆ
ಬಿಳಿ ಬಣ್ಣದ ಕಲೆ ಮುದುಡಿ ರೆಕ್ಕೆಗಳನ್ನು ಮತ್ತೆ
ಬಂದು ಕೂತಿದೆ ನದಿ ಪಾತ್ರದಲಿ ನಾಲ್ಕೂ ದಿಕ್ಕುಗಳಲಿ,
ಚೆಲ್ಲಾಪಿಲ್ಲಿಯಾಗಿ ಹಾರಿಹೋದ ನನ್ನ
ಶಬ್ದಗಳು ಮತ್ತೆ ವಾಪಸ್ಸು ಬರುತ್ತಿವೆ
ಖಾಲಿಖಾಲಿಯಾಗಿ ನಾನು
ಕೂವೆ ಕಂಬವನ್ನೇ ದಿಟ್ಟಿಸಿ ನೋಡುತ್ತಿರುವೆ.

# ಜಸಲ್ಮೇರ್‌ನ ಸ್ವಪ್ನ

ಮೂಲ : **ಗುಲಾಂ ಮಹಮದ್‌ಷೇಕ್** ಅನು : **ಎಚ್.ಎಸ್. ಶಿವಪ್ರಕಾಶ್**

ಅಚ್ಚಬಿಳಿ ಮರಳುಡುಬ್ಬಗಳ ಮೊಲೆತೊಟ್ಟಿಗೆ ಜೋತ ಕತ್ತಾಳೆ ದಿಬ್ಬಗಳ ಸುತ್ತಾ
ಸುತ್ತಿಕೊಂಡಿರುವ ಬೆಚ್ಚಗಿನ ಗಾಳಿ ನಿಡುಸುಯಿಲು
ಕಾಡಿನ ಬಂಜೆ ತೊಡೆಯಿಂದ ಒಸರಿತು
ಎಂಟು ವರ್ಷಗಳಿಂದ ನೀರ ಸುಳಿವನ್ನೂ ತೊಡೆದು ಹಾಕಿರುವ ಬಿಸಿಗಾಳಿ,
ಊರಾಚೆ ಧೂಳಲ್ಲಿ ಬಿಸಿಲು ಕುದುರೆಯ ಡೇರಿಯ ಹರಹು
ತಿಪ್ಪೆಯ ಒಣ ಹುಲ್ಲನ್ನೆತ್ತಿ ಮೇಲಕ್ಕೇಳುವ ಬಿರುಗಾಳಿ
ಹೊಸಿಲು ಹೊಸಿಲಲ್ಲಿ ದೆವ್ವಹಿಡಿದವನಂತೆ ತೂರಾಡುತ್ತದೆ.

ಸಾವಿರಾರು ವರ್ಷಗಳ ಹಿಕ್ಕೆಯ ಗಬ್ಬುವಾಸನೆ ಹೊಡೆವ ದೊಡ್ಡ ಹಟ್ಟಿ ಸುತ್ತಾ
ಕಿಲ್ಲೆಗಳ ಕೆಂಪು ಮೂಲಂಗಿ ತೊಗಟೆ,
ಅದರ ಹೊಟ್ಟೆಯಲ್ಲಿ ಝುಳಪಿಸುವ ಖಡ್ಗಗಳ ಕಲೆ
ಸತ್ತ ಸವಾರರ ಮಣ್ಣ ಹೆಂಟೆ ತಿನ್ನುತ್ತಾ
ತುಳಸಿ ಎಲೆಗಳನ್ನು ಕಿತ್ತುಹಾಕುತ್ತಾ
ಮುಚ್ಚಿದ್ದ ಕಿಟಕಿ ಬಾಗಿಲುಗಳ ಬಿರುಕೊಳಗೆ ಸುರಸುರ ಸುರಗುಟ್ಟುತ್ತಾ

ಅಳುವ ಮಕ್ಕಳ ಕಣ್ಣುಗಳಲ್ಲಿ
ಎಲ್ಲೋ ಕೆಲವು ಗೃಹಿಣಿಯರ ಬೇಸರಗೊಂಡ ಯೋನಿಗಳಲ್ಲಿ
ಮಲಗಿರುವ ತೇವವನ್ನು ನೆಕ್ಕುತ್ತಿದೆ ಸೂರ್ಯನ ಹಂದಿ ಮೂತಿ.

ದಿನ ಕಳೆದು ದಿನ, ದಿನ ಕಳೆದು ದಿನ
ಈ ದಿನ ಒಂಭತ್ತನೇ ಮಳೆಗಾಲದ ಸಂಜೆ
ಕಿಲ್ಲೆಗಳ ಬದಿಯಲ್ಲಿ ನೆಟ್ಟಗೆ ನಿಂತ ದೊಡ್ಡ ಹಟ್ಟಿಗಳ ತುದಿಯನ್ನು ನೇವರಿಸುತ್ತಿದೆ

ಬಿಳಿಕುರಿಯ ಹಾಗಿರುವ ತೆಳುಮೋಡ
ಗಗನದ ಈ ಮೂಲೆಯಿಂದ ಆ ಮೂಲೆವರೆಗೆ ಅಡ್ಡಾಡುತ್ತಿವೆ
ರೈತ ರಾಜಪುತ್ರರ ಹಸಿದ ನಾಲಗೆಯಲ್ಲಿ ಉರಿಯುತ್ತಿದೆ ಬೇಗೆ
'ಈ ಬರಡು ಮರಳುಗಾಡ ನಗರದ ಉಂಗುಷ್ಟವನ್ನೊತ್ತಿ ಹತ್ತುವೆನು ಕಿಲ್ಲೆ ತುದಿಯನ್ನು;
ಅಚ್ಚ ಬಿಳಿ ಮೋಡದ ತೋಳು ಹಿಡಿದೆಳೆಕೊಂಡು
ಬಸಿರಾಗಿಸುತ್ತೇನೆ, ಒಡೆಸುತ್ತೇನೆ ಹೊಟ್ಟೆಯನ್ನು.'

# ಹೊಸಗನ್ನಡ ಸಾಹಿತ್ಯದಲ್ಲಿ ಅಂತರಜಾತಿ ವಿವಾಹದ ಕುರಿತು ಜಿಜ್ಞಾಸೆ :

- ಡಾ. ಕೇಶವ ಶರ್ಮ ಕೆ.

ನಾವು ಇಲ್ಲಿ ಅಂತರಜಾತಿ ವಿವಾಹದ ಬಗೆಗೆ ಮತ್ತು ಅದರಿಂದ ಉಂಟಾಗುವ ಅವಾಂತರಗಳ ಬಗೆಗೆ ಜಿಜ್ಞಾಸೆ ನಡೆಸುತ್ತಿದ್ದೇವೆ. ಇಲ್ಲೊಂದು ಸೂಕ್ಷ್ಮವಾದ ವಿಚಾರ ಅಡಗಿದೆ. ನಮಗೆ ಅಂತರ ಜಾತಿ ವಿವಾಹ ಎನ್ನುವುದು ಒಂದು ಸಮಸ್ಯೆಯಾಗಿ ಕಾಡುತ್ತಿದೆ. ಅಂತರ ವರ್ಗಗಳ ಮದುವೆ ನಮಗೆ ಸಮಸ್ಯೆಯಾಗಿಲ್ಲವೆಂದು ಭಾವಿಸಿದ್ದೇವೆ. ಜಾತಿ ಸಂಬಂಧಿತ ವಿಚಾರಗಳಲ್ಲಿ ಜಾತಿಯ ಪಾವಿತ್ರ್ಯದ ಹಾಗೂ ಕುಟುಂಬ ಕೇಂದ್ರಿತ ಮನೋವೃತ್ತಿಯ ಅನೇಕ ಸಂಗತಿಗಳು ಪರಸ್ಪರ ತಳಕನ್ನು ಪಡೆದುಕೊಂಡಿವೆ. ಅಂತರವರ್ಗದ ಸಮಸ್ಯೆಯ ಸಂದರ್ಭದಲ್ಲಿ ನೇರವಾಗಿ ಆರ್ಥಿಕ ಪ್ರಸಕ್ತಿಗಳಿಗೆ ಒತ್ತು ಇರುತ್ತದೆ. ಮುಖ್ಯವಾಗಿ ಈ ದೃಷ್ಟಿಯಿಂದ ಮದುವೆಯಂತಹ ಒಂದು ಸಾಂಸ್ಥಿಕ ಪರಿಭಾಷೆಗೆ ಸಾಮಾಜಿಕ ಮತ್ತು ಆರ್ಥಿಕ ಆಯಾಮಗಳು ಇರುವುದನ್ನು ನಾವು ನಿರಾಕರಿಸುತ್ತಿದ್ದೇವೆಯೇ? ಜಾತಿ ಪರಿಕಲ್ಪನೆಯನ್ನು ನೋಡಿದರೆ ಪ್ರತಿಯೊಂದು ಜಾತಿಯು ತನ್ನದೇ ಆದ ಕಸುಬುಗಳನ್ನು ಒಳಗೊಂಡಿವೆ. ವ್ಯಾವಹಾರಿಕ ಅರ್ಥದಲ್ಲಿ ನಾವು ಇದನ್ನು 'ಕುಲಕಸುಬು' ಎಂದು ಕರೆಯುತ್ತಿದ್ದೇವೆ. ಸಾಂಪ್ರದಾಯಿಕ ಸಮಾಜದಲ್ಲಿ ಕುಲಕಸುಬು ಒಂದು ರೀತಿಯಿಂದ ತನ್ನ ಜಾತಿಯನ್ನು ಸಂರಕ್ಷಿಸಿಕೊಳ್ಳುತ್ತಿವೆ. ವಸಾಹತುಶಾಹಿ ಅನುಭವದ ನಂತರ ಈ ಕುಲ ಕಸುಬು ಬದಲಾಯಿತು. ಇದಕ್ಕಿರುವ ಪ್ರಧಾನ ಕಾರಣವೇನೆಂದರೆ ಉತ್ಪಾದನಾ ಸಂಬಂಧಗಳಲ್ಲಿ ಉಂಟಾದ ಬದಲಾವಣೆ. ಹೊಸ ಹೊಸ ಮಾದರಿಯ ಉದ್ಯೋಗಗಳು ಹಳೆಯ ಮಾದರಿಯ ಉದ್ಯೋಗಗಳನ್ನು ಕೆಲವೊಂದು ಸಂದರ್ಭಗಳಲ್ಲಿ ನಾಶಪಡಿಸುತ್ತಿವೆ. ಈ ರೀತಿ ಚಾರಿತ್ರಿಕ ಬದಲಾವಣೆಯಲ್ಲಿ ಸಾಂಪ್ರದಾಯ ತಿಳಿವಳಿಕೆಯು ಬದಲಾಗುತ್ತದೆ. ಹೊಸ ಮಾದರಿ ಉತ್ಪಾದನಾ ಸಂಬಂಧಗಳ ಮಾದರಿಯಲ್ಲಿ ಕುಲ ತನ್ನ ಪಾವಿತ್ರ್ಯವನ್ನು ಎಷ್ಟರಮಟ್ಟಿಗೆ ಉಳಿಸಿಕೊಳ್ಳಬಲ್ಲದು?

ಮದುವೆ ಎನ್ನುವುದು ಒಂದು ಗಂಡು ಮತ್ತು ಒಂದು ಹೆಣ್ಣಿನ ಸಂಬಂಧವಾದರೂ ಈ ಸಂಬಂಧದಲ್ಲಿ ಸಾಂಸ್ಕೃತಿಕ ಅಂಶಗಳೂ ಸೇರ್ಪಡೆಗೊಂಡಿವೆ. ಮದುವೆ ಈ ಅರ್ಥದಲ್ಲಿ ಒಂದು ಭಾವನಾತ್ಮಕ ಪ್ರಕ್ರಿಯೆ. ಪರಸ್ಪರ ಮನಸ್ಸುಗಳ ಜೋಡಣೆ ಎನ್ನುವುದು ನಿರ್ದಿಷ್ಟ ಚಾರಿತ್ರಿಕ ಸಂದರ್ಭದ ಮನೋಗತ ಅಭಿಪ್ರಾಯಗಳ ದ್ಯೋತಕವಾಗಿರುತ್ತದೆ. ವಸಾಹತುಶಾಹಿ ಅನುಭವದ ಅನಂತರದಲ್ಲಿ ನಮ್ಮೆಲ್ಲರ ಯೋಚನಾ ಕ್ರಮ ಬದಲಾಯಿತು. ಈ ರೀತಿ ಸಾಮಾಜಿಕ ಪ್ರಕ್ರಿಯೆಗೆ ಅನ್ವಯಿಸಿಕೊಂಡೇ ನಾವು ಮದುವೆಯ ಬಗೆಗೆ ಮಾತನಾಡುತ್ತಿದ್ದೇವೆ. ವಸಾಹತುಶಾಹಿ ಅನುಭವ ಸಾಂಪ್ರದಾಯಿಕ ಸಮಾಜಕ್ಕೆ ಮತ್ತು ಹೊಸ ಸಮಾಜದ ನಡುವೆ ಒಂದು ಬಿರುಕನ್ನು ತಂದು ಕೊಟ್ಟಿದೆ.

ಈ ಬಿರುಕೆ ಅನೇಕ ಸಾಂಸ್ಕೃತಿಕ ಸಂಬಂಧಗಳ ನಡುವೆ ನಿರ್ದಿಷ್ಟ ವೈಚಾರಿಕ ಪ್ರಣಾಳಿಕೆಯನ್ನು ರೂಪಿಸಿಕೊಟ್ಟಿತು. ಈಗಂತೂ ಬ್ರಾಹ್ಮಣನೊಬ್ಬ ಚಪ್ಪಲಿ ಅಂಗಡಿ ಇಡುತ್ತಾನೆ. ಬಾರ್‌ನಲ್ಲಿ ಕೆಲಸ ಮಾಡುತ್ತಾನೆ. ಶೂದ್ರಾತಿಶೂದ್ರನೊಬ್ಬ ಶಿಕ್ಷಕನಾಗುತ್ತಾನೆ. ಜಮೀನ್ದಾರಿ ಪದ್ಧತಿಯನ್ನು ಹೇಳಿಕೊಟ್ಟ ಕಸುಬುಗಳಲ್ಲಿ ಬ್ರಾಹ್ಮಣ ಹುಡುಗ ಚಪ್ಪಲಿ ಮಾರಲು ಸಾಧ್ಯವಿಲ್ಲ ಹಾಗೆಯೇ ಶೂದ್ರ ಹುಡುಗನೊಬ್ಬ ಐಗಳ ಮಠದಲ್ಲಿ ಪಾಠಮಾಡುವ ಕನಸು ಕಾಣುವಂತಿಲ್ಲ. ಈಗಿನ ಸಂದರ್ಭ ಹೇಗಿದೆ ಎಂದರೆ ಶಿಕ್ಷಕ ವೃತ್ತಿಯಲ್ಲಿರುವ ಕೆಳ ಜಾತಿಯ ಹುಡುಗನೊಬ್ಬನನ್ನು ಆತನ ಪಾಠಕ್ಕಾಗಿಯೋ ವ್ಯಕ್ತಿತ್ವಕ್ಕಾಗಿಯೋ ಜೀವನದ ಸ್ಥಿರತೆಗಾಗಿಯೋ ಮೇಲ್ಜಾತಿ ಹುಡುಗಿಯೊಬ್ಬಳು ಪ್ರೇಮಿಸಿ ಮದುವೆ ಆಗುತ್ತಾಳೆ. ಹಾಗೆಯೇ ಚಪ್ಪಲಿ ಅಂಗಡಿಯಿಟ್ಟ ಬ್ರಾಹ್ಮಣ ಹುಡುಗನೊಬ್ಬ ತನ್ನ ಸಂಪರ್ಕದ ದೆಸೆಯಿಂದಾಗಿ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾಗುವ ಸಾಧ್ಯತೆ ಇದೆ. ಈ ಮಾತುಗಳನ್ನು ಹೇಳುವುದಕ್ಕೆ ಕಾರಣವಿಷ್ಟೇ. ಉತ್ಪಾದನಾ ಸಂಬಂಧಗಳ ಬದಲಾವಣೆಯು ನಮ್ಮ ಮಾನಸಿಕ ವ್ಯಾಪಾರಗಳನ್ನು ಬದಲಾಯಿಸುತ್ತಲೂ ಹೋಗುತ್ತವೆ ಮತ್ತು ಅದರಿಂದಾಗಿ ಸ್ವಾತಂತ್ರ್ಯ ಸಮಾನತೆ ಮೊದಲದ ಆಕರ್ಷಕ ಪದಗಳನ್ನು ಸಾಂಪ್ರದಾಯಿಕ ಸಮಾಜವನ್ನು ಭೇದಿಸುವುದಕ್ಕಾಗಿ ಬಳಸಿಕೊಳ್ಳುತ್ತೇವೆ. ನಾಗರೀಕ ಜಗತ್ತಿನ ಪರಿಕಲ್ಪನೆಯಲ್ಲಿ ಜಾತಿ ಎನ್ನುವುದು ಒಂದು ರೀತಿಯ ಭ್ರಮಾತ್ಮಕ ಕಲ್ಪನೆ ಮಾತ್ರ ಅಂತರಜಾತಿ ಒಳಗಿನ ಸಂಬಂಧಗಳು ಈ ಕಾರಣದಿಂದ ಆಧುನಿಕ ನಾಗರೀಕ ಜಗತ್ತಿನಲ್ಲಿ ಸಾಧ್ಯ. ನಾಗರೀಕ ಜಗತ್ತು ಈ ರೀತಿಯ ಅನೇಕ ವ್ಯಾಮೋಹಗಳನ್ನು ತನ್ನ ಬಸಿರಲ್ಲಿ ಇಟ್ಟುಕೊಳ್ಳುತ್ತದೆ. ಸಾಂಪ್ರದಾಯಿಕ ಸಮಾಜವನ್ನು ಭೇದಿಸುವುದಕ್ಕೆ ಅಂತರಜಾತಿಗಳ ಒಳಗಣ ಸಂಬಂಧವು ಒಂದು ಆಂತರಿಕ ವೃತ್ತಿ ಮಾತ್ರ.

ಮದುವೆಯ ಬಗೆಗೆ ಸಾಂಪ್ರದಾಯಿಕ ಸಮಾಜದಲ್ಲಿ ಕೊಟ್ಟ ಮಾದರಿ ಆಧುನಿಕ ಜೀವನ ಕ್ರಮಕ್ಕೆ ತೀರವಾಗಿ ಲಗತ್ತಾಗುವುದಿಲ್ಲ. ಮದುವೆಯಂತಹ ಒಂದು ಸಂಸ್ಥೆಯನ್ನು ಕುರಿತು ನಾವು ಹೀಗೆ ವ್ಯಾಖ್ಯಾನಿಸುತ್ತೇವೆ ಅನ್ನುವುದರ ಮೇಲೆ ತಾತ್ವಿಕ ಪ್ರಶ್ನೆಗಳು ಅಡಕಗೊಂಡಿವೆ. ಅಂತರಜಾತಿ ವಿವಾಹಗಳನ್ನು ಕ್ರಾಂತಿಯ ಬಹಳ ದೊಡ್ಡ ಹುನ್ನಾರಗಳೆಂದು ಸುಲಭವಾಗಿ ವೈಭವೀಕರಿಸಿ ಬಿಡಬಹುದು ಅಥವಾ ಅಂತರಜಾತಿ ವಿವಾಹವಾದವರು ತಾವು ಶ್ರೇಷ್ಠ ಪ್ರಗತಿಪರ ವಿಚಾರಧಾರೆಗಳ ಪ್ರವರ್ತಕರೆಂದು ಉದ್ಘೋಷಿಸಿಬಿಡಬಹುದು. ಸ್ವಲ್ಪ ರಿಯಾಯ್ತಿ ದರದಲ್ಲಿ ಸಿಕ್ಕುವ ಖಾದಿ ಷರಟನ್ನು ಹೊಲಿಸಿಕೊಂಡು ತಾನೊಬ್ಬ ಕ್ರಾಂತಿಕಾರಿ ಎಂದು ಹೇಳಿಕೊಳ್ಳುವುದಕ್ಕೂ ಬಹಳ ವ್ಯತ್ಯಾಸವೇನೂ ಕಾಣುವುದಿಲ್ಲ. ಅಂತರಜಾತಿ ವಿವಾಹವಾಗುವವರು ಯಾರು ಯಾವ ಸಂದರ್ಭದಲ್ಲಿ ಹೇಗೆ ಮದುವೆಯಾಗುತ್ತಾರೆ ಎನ್ನುವುದರಿಂದಷ್ಟೇ ಕೆಲವು ತೀರ್ಮಾನಗಳನ್ನು ನಾವು ಮಾಡಬಹುದು. ಈಗಾಗಲೇ ಹೇಳಲಾಗಿರುವಂತೆ ಚಾರಿತ್ರಿಕ ಬದಲಾವಣೆ ಎನ್ನುವುದು ನಮ್ಮೆಲ್ಲ ಆಯ್ಕೆಗಳನ್ನು ಬದಲಾಯಿಸುತ್ತಾ ಹೋಗುತ್ತವೆ. ಮೌಲ್ಯಗಳ ಸ್ವರೂಪವನ್ನು ನಿರ್ಧರಿಸುತ್ತದೆ. ಜಮೀನ್ದಾರಿ - ಪದ್ಧತಿಯ ಉತ್ಪಾದನಾ ಕ್ರಮಗಳಿಂದ ಆಧುನಿಕ ಉತ್ಪಾದನಾ ಕ್ರಮಗಳ ಕಡೆಗೆ ಪಲ್ಲಟಗೊಂಡಾಗ ನಮ್ಮೆಲ್ಲರ ಜೀವನ ಕ್ರಮದಲ್ಲೂ ಅನೇಕ ಪಲ್ಲಟಗಳು ಉಂಟಾದವು. ಮಾರುಕಟ್ಟೆ ಸಂಸ್ಕೃತಿಯ ಕಡೆಗೆ ಸಮಾಜವೊಂದು ಜಿಗಿದಾಗ "ಮದುವೆ" ಪ್ರತ್ಯೇಕವಾಗಿ ಉಳಿಯಲು ಸಾಧ್ಯವಿಲ್ಲ. ಮದುವೆಯು ಒಂದು ನಿರುದ್ದೇಶವಾದ ಪ್ರಕ್ರಿಯೆ ಅಲ್ಲ ಹೀಗೆಯೇ. ನಮಗೆಲ್ಲ ಗೊತ್ತಿರುವಂತೆಯೇ ಯಾರೂ ನಾನು ಸುಮ್ಮನೆ ಮದುವೆಯಾದೆ ಎನ್ನುವುದಿಲ್ಲ. ಕುಟುಂಬ ಸ್ವರೂಪದ ಆಧುನಿಕ ವ್ಯಾಖ್ಯಾನ ಉತ್ಪಾದನೆ ಸಂಬಂಧಗಳನ್ನು ಅಳವಡಿಸಿಕೊಂಡಿದೆ. ಕುಟುಂಬದಲ್ಲಿಯೂ ವಿಸ್ತೃತ ಅರ್ಥದಲ್ಲಿ

ಮದುವೆಯಲ್ಲಿಯೂ ಯಾರು ಯಾರನ್ನು ಆಳುತ್ತಾರೆ ಎಂಬುದಷ್ಟೇ ಮುಖ್ಯವಾಗಿರುತ್ತದೆ. ವಸಾಹತುಶಾಹಿ ಸನ್ನಿವೇಶದಲ್ಲಿ ಉಂಟಾದ ಪರಿವರ್ತನೆಯು ಇಷ್ಟಿದ್ದರೂ ಕೂಡಾ ಪೂರ್ಣರೂಪಿ ಬದಲಾವಣೆ ಪಕ್ಕಾಗಲಿಲ್ಲ. ಬಂಡವಾಳಶಾಹಿ ಜಗತ್ತಿನ ಪೂರ್ವದ ಅನುಭವವು ಹಾಗೆಯೇ ಬಂಡವಾಳಶಾಹಿ ಜಗತ್ತಿನ ವಿಕೃತಿಯ ಅನುಭವಶಾಹಿ ಜೊತೆ ಜೊತೆಗೆ ಸೇರಿಕೊಂಡಿದ್ದರಿಂದಲೇ ನಾವು ಅಂತರ ಜಾತಿ ವಿವಾಹದ ಬಗೆಗೆ ಇಷ್ಟೊಂದು ತಲೆ ಕೆಡಿಸಿಕೊಳ್ಳುತ್ತಿದ್ದೇವೆ. ಉದ್ಯೋಗದ ಆಯ್ಕೆಯಲ್ಲಿಯೂ ಕಳೆದ ೫೦ ವರ್ಷದ ಕೆಳಗಿನ ಅನುಭವಕ್ಕೂ ಈಗಿನ ಅನುಭವಕ್ಕೂ ಭಿನ್ನತೆ ಇದೆ. ಉಪಜಾತಿಗಳ ನಡುವೆ ಮದುವೆಯಾದಾಗ ನಾವು ಅಷ್ಟೊಂದು ಯೋಚನೆ ಮಾಡುವ ಆಗಿಲ್ಲ. ಹಾಗೆಯೇ ಸಗೋತ್ರ ವಿವಾಹ ಅಥವಾ ಕಳ್ಳುಬಳ್ಳಿಯ ನಡುವಣ ಸಂಬಂಧಗಳ ಪರಿಭಾಷೆಯು ಈ ಕಾರಣದಿಂದ ಈಗಲೂ ಪ್ರಮುಖ ಹಿತಾಸಕ್ತಿಯಾಗಿ ಕೆಲಸ ಮಾಡುತ್ತದೆ.

ಕಾರಂತರ 'ನಂಬಿದವರ ನಾಕನರಕ' ಕಾದಂಬರಿಯಲ್ಲಿ ಬ್ರಾಹ್ಮಣ ಮನೆತನದ ಹುಡುಗಿಯೊಬ್ಬಳನ್ನು (ವಾಗ್ದೇವಿ) ತಿಳಿಯದಯೇ ಷಟ್ಪುಚ್ಛ ಮನೆತನದ ಗಂಡಿನ ಜೊತೆಗೆ ಮದುವೆ ಮಾಡಲಾಗುತ್ತದೆ. ಕಾರಂತರು ಈ ಕಾದಂಬರಿಯಲ್ಲಿ ಅನೇಕ ಸಾಂಸ್ಕೃತಿಕ ವಿಚಾರಗಳನ್ನು ಕೊಡುತ್ತಾರೆ. ಷಟ್ಪುಚ್ಛ ಬ್ರಾಹ್ಮಣರ ಬಗೆಗೆ ಕಾದಂಬರಿಯಲ್ಲಿ ಕೆಲವು ವಿವರಗಳು ಈ ರೀತಿ ಬರುತ್ತವೆ. ಅವರಿಗೆ ಬ್ರಾಹ್ಮಣರೊಂದಿಗೆ ಸಹಪಂಕ್ತಿಯಲ್ಲಿ ಹೊಲೆಯರಿಗಿಂತಲೂ ನಿಕೃಷ್ಟ (ಪು-೯) ಇದೇ ಷಟ್ಪುಚ್ಛದವರ ಬಗೆಗೆ ಕಾದಂಬರಿಯಲ್ಲಿ ವಾಗ್ದೇವಿಯು ಹೀಗೆ ವಿವರಿಸುತ್ತಾಳೆ. "ಬಹು ಹಿಂದೆ ಈ ಮನೆಯವರು ಬಿದರೂರು ಸಂಸ್ಥಾನದಲ್ಲಿ ಉಗ್ರಾಣದ ಮೇಲ್ತನಿಕೆ ನೋಡಿಕೊಂಡಿರುತ್ತಿದ್ದರಂತೆ. ಹೈದರಾಲಿಯಿಂದ ಕೆಳದಿ ಅರಸರು ಹಾಳಾದ ಮೇಲೆ ಇವರು ಇಲ್ಲಿಗೆ ಬಂದರು. ಈ ಸ್ಥಾಪಿತ ಸ್ಥಳದಲ್ಲಿ ಬೇರೂರಿದರು... ಅವರೇನೋ ಜಾತಿಯಲ್ಲಿ ಬ್ರಾಹ್ಮಣರು. ಹವ್ಯಕರೆ ಅಂತೆ... ಆ ಪರಮೇಶ್ವರಯ್ಯನವರಿಗೆ ಒಟ್ಟಿಗೆ ಆರು ಮಂದಿ ಅರಸಿಯರಂತೆ. ಒಬ್ಬಳು ಮಾತ್ರ ಇದ್ದದ್ದು ಇಲ್ಲಿ ಈ ಸೌಗೋಡಿಯಲ್ಲಿ ಆದರಿಂದಲೇ 'ಷಟ್ಪುಚ್ಛ' ಎಂಬ ಹೆಸರು ಅವರಿಗೆ ಬಂದಿತು ಎಂದು ಕತೆ ನನ್ನನ್ನು ಕೈ ಹಿಡಿದ ದೇವರು ಎಂಬುದರಿಂದಇಷ್ಟೆಲ್ಲ ದೊಡ್ಡ ಸಂಕಟ ನೋಡಿಕೊಂಡೆ ಒಂದೊಂದು ಸಾರಿ ಈ ಬದುಕೇ ಬೇಡ ಅನ್ನಿಸುತ್ತದೆ. ಒಂದೊಂದು ಸಾರಿ ದೈವೇಚ್ಛೆ ಹೇಗಿದೆಯೆಂಬುದನ್ನು ನೋಡಿಯೇ ಬಿಡಬೇಕು ಎಂಬ ಹಟವಾಗುತ್ತದೆ." (ಪುಟ - ೨೯೭) ಈ ಕಾದಂಬರಿಯಲ್ಲಿ ಷಟ್ಪುಚ್ಛದ ನಾಗೇಂದ್ರನು ತಾನು ಬ್ರಾಹ್ಮಣನೆಂದೇ ಹೇಳಿಕೊಳ್ಳುತ್ತಾನೆ. ಕಾದಂಬರಿಯಲ್ಲಿ ಮುದುಕಿಯ ಶಾಪವು ಮುಖ್ಯವಾಗಿದೆ. ಮುದುಕಿಯೊಬ್ಬಳು ಜಾತಿ ಭ್ರಷ್ಟವಾದ ಈ ಮದುವೆಯ ಕುರಿತು ಹೀಗೆ ಶಾಪವನ್ನು ಕೊಡುತ್ತಾಳೆ "ಯಾವನೇ ಆಗಲಿ ಯಾವನೇ ಇದನ್ನು ಮಾಡಿಸಿರಲಿ ಅವನ ಕುಲ ನಿಸ್ಸಂತಾನವಾದೀತು ಆ ಮೂಕಾಂಬಿಕೆ ಇಂತಹ ಅನ್ಯಾಯವನ್ನು ನೋಡಿಕೊಂಡು ಕುಳಿತಿರಲಾರಳು." (ಪುಟ - ೨೦) ಇದು ಕಾದಂಬರಿಯುದ್ದಕ್ಕೂ ಹರಡುತ್ತದೆ. ಈ ಮದುವೆಯಲ್ಲಿ ಹೆಣ್ಣು ಕೊಟ್ಟ ತಂದೆಗೂ ಅಪಮಾನವಾಗಿ ಊರುಬಿಡುತ್ತಾನೆ. ಉಪಜಾತಿಗಳ ನಡುವಣ ವಿವಾಹ ಸಂಬಂಧವನ್ನು ಕಾರಂತರು ವಿವರಿಸುವಾಗ ಜಾತಿಭ್ರಷ್ಟತೆ ಕುರಿತು ವಿಮರ್ಶಿಸುತ್ತಾರೆ. ಕಾದಂಬರಿ ಒಳಗೆ ಕಾರಂತರು ಕೆಲವು ಆಂತರಿಕ ಕಾರಣಗಳನ್ನು ಕೊಡುತ್ತಾರೆ. ಆಂತರಿಕ ಕಾರಣಗಳ ಪ್ರಕಾರ .

೧. ಬ್ರಾಹ್ಮಣ ಜನಾಂಗದಲ್ಲಿ ಮದುವೆ ವಯಸ್ಸಿಗೆ ಬಂದ ಹುಡುಗಿಯನ್ನು ಮದುವೆ ಮಾಡಲೇಬೇಕು ಎನ್ನುವ ಒತ್ತಾಯವೊಂದು ಇಲ್ಲಿ ಕೆಲಸ ಮಾಡಿದೆ.

೨. ಮದುವೆಯಾಗುವ ಗಂಡಿಗೆ ಸಾಕಷ್ಟು ಆಸ್ತಿ ಇದೆ.
೩. ಇಲ್ಲಿ ಅಂತರಜಾತಿಯ ವಿವಾಹವಾಗಿರುವುದು ತಿಳಿಯದೇ ಉಂಟಾಗಿರುವ ತಪ್ಪಿನಿಂದ
೪. ಇಲ್ಲಿ ಹೆಣ್ಣಿನ ಜಾತಿಯು ಮೇಲ್ತರಗತಿಗೆ ಸೇರಿದ್ದು, ಅದರಿಂದಾಗಿ ಪಾಪ ಪ್ರಜ್ಞೆಗೆ ಗುರಿಯಾಗಿಯೂ ಒಪ್ಪಂದ ಮಾಡಿಕೊಳ್ಳುತ್ತಾಳೆ.
೫. ಹೆಣ್ಣಿನ ತಂದೆ ಈ ಅಪಮಾನಕ್ಕೆ ಗುರಿಯಾಗಿ ಊರು ಬಿಟ್ಟು ಹೋಗುತ್ತಾನೆ.
೬. ಇಲ್ಲಿ ಪ್ರಾದೇಶಿಕ ಭಿನ್ನತೆಯಿದೆ ಕಾರಂತರು ಇದರ ಮುಖಾಂತರ ಹೆಣ್ಣಿಗೆ ಉಂಟಾಗಬಹುದಾದ ತಲ್ಲಣಗಳು ಮದುವೆಯಾದ ಗಂಡಿಗೆ ಉಂಟಾದ ಪಾಪ ಪ್ರಜ್ಞೆ ಇತ್ಯಾದಿಗಳನ್ನು ನಿರೂಪಿಸಿದ್ದರಿಂದ ಜಾತಿಗೆ ಇರಬಹುದಾದ ಪಾವಿತ್ರ್ಯದ ಸಂಗತಿಗಳನ್ನು ಕಾರಂತರು ನಿರೂಪಿಸಿದಂತಾಗಿದೆ. ಇಲ್ಲಿ ನೈತಿಕ ಪ್ರಸಕ್ತಿಗಳು ಮುಖ್ಯ ಸಾಂಪ್ರದಾಯಿಕ ಮದುವೆಯೊಂದರಲ್ಲಿರಬಹುದಾದ ಕೌಟುಂಬಿಕ ಸಂಪ್ರದಾಯಗಳ ಸಂಬಂಧವೇ ಈ ಕಾದಂಬರಿಯಲ್ಲಿ ಹೇಳಲಾಗಿರುವುದರಿಂದ ಕಾರಂತರ ಮುಖ್ಯ ಒಲವು ನಿರ್ದಿಷ್ಟ ಆತಂಕವೊಂದರಲ್ಲಿ ಹುಟ್ಟಿಕೊಂಡಿದೆ. ಇದರಿಂದಾಗಿ ಜಾತಿ ಪಾವಿತ್ರ್ಯವು ನಾಶಗೊಂಡಿದೆ. ಉಚ್ಚಜಾತಿಗಿರುವ ಆಚರಣೆ ಬದ್ಧಸ್ವರೂಪವು ಈ ಜಾತಿ ಭ್ರಷ್ಟತೆಯಿಂದಾಗಿ ಒಂದು ಕುಟುಂಬದಲ್ಲಿ ಮಾತ್ರ ನಿರಸನಗೊಳ್ಳುವಂತಹದು. ಶುದ್ಧ ಬ್ರಾಹ್ಮಣರ ಎದುರಿನಲ್ಲಿ ಷಟ್ಟುಪಚ್ಚೆದವರಿಗೆ ಸ್ಥಾನವಿಲ್ಲ. ಒಂದು ಜಾತಿಯಲ್ಲಿ ರೂಪುಗೊಳ್ಳುವ ಆಂತರಿಕ ಒತ್ತಾಯಗಳನ್ನು ನಿರೂಪಿಸುವುದು ಕಾರಂತರ ಒತ್ತಾಯ ಜಾತಿ ಸಂಸ್ಕೃತಿಯ ಈ ರೀತಿಯ ಮದುವೆ ಮುಖಾಂತರ ಹೇಗೆ ಮಾನಸಿಕ ಪರಿಣಾಮ ಬೀರುತ್ತದೆ ಎನ್ನುವುದನ್ನು ಕಾದಂಬರಿಯು ನಮಗೆ ಸವಿವರವಾಗಿ ಹೇಳುತ್ತದೆ. ಬಲಗೊಳ್ಳುವ ಜಾತಿಯೊಂದರ ಬಿಕ್ಕಟ್ಟನ್ನು ಈ ಕಾದಂಬರಿ ಹೇಳಿದೆ. ಈ ಕಾದಂಬರಿಯು ಒಳಗೊಂಡಿರುವುದು ಹಳ್ಳಿಯ ಜಾತಿ ಬದ್ಧ ಸಾಮಾಜಿಕ ಸ್ಥಿತಿಯನ್ನು ಷಟ್ಟುಪಚ್ಚೆ ಬ್ರಾಹ್ಮಣರಿಗೆ ಮತ್ತು ನಿಜವಾದ ಬ್ರಾಹ್ಮಣರಿಗೆ ಕೆಲವು ಸಮಾನ ಅಂಶಗಳಿವೆ. ಎರಡೂ ಜಾತಿಗಳಿಗೆ ಮದುವೆಯ ಸಂಬಂಧವಾಗುವುದನ್ನು ಚಿತ್ರಿಸಿದ್ದಾರೆ ಕಾರಂತರು ಈ ಮದುವೆಯನ್ನು ಸಾಂಪ್ರದಾಯಿಕ ರೀತಿಯಲ್ಲಿ ಏರ್ಪಡಿಸುತ್ತಾರೆ ಎಂಬುದು ಕೂಡಾ ಗಮನಾರ್ಹವಾಗಿದೆ.

ಕಾರಂತರ 'ಬತ್ತದ ತೊರೆ' ಕಾದಂಬರಿಯಲ್ಲಿ ವೇಶ್ಯೆಯ ಮಗಳಾದ ವಿನತೆಯನ್ನು ಗಾಂವಕಾರ ಮದುವೆಯಾಗುತ್ತಾನೆ. ಈ ಮದುವೆಯು ಸಾಂಪ್ರದಾಯಿಕವಾದ ಮಾದರಿಯದಲ್ಲ. ಆಧುನಿಕತೆಯ ಮಾದರಿಯದು, ಆದರೆ ಮದುವೆಯು ಸಮರಸದಿಂದ ಕೂಡಿಕೊಂಡಿಲ್ಲ. ವಿಷಮ ದಾಂಪತ್ಯ ಜೀವನದ ಕಹಿ ಅನುಭವ ಹೆಣ್ಣಿನ ಪಾಲಿಗುಂಟಾಗುತ್ತದೆ. ಈ ಕಾದಂಬರಿಯಲ್ಲಿ ಗಾಂವಕಾರ ಹೀಗೆ ಹೇಳುತ್ತಾನೆ. "ಎಷ್ಟೆಂದರೂ ನಾನು ಮೂರ್ಖ ತಿಳಿದೂ ತಿಳಿದೂ ನಿನ್ನಂತಹ ಕುಲಗೆಟ್ಟ ಹುಡುಗಿಯನ್ನು ತಂದು ಲಗ್ನವಾಗುವುದಕ್ಕೆ ಜಾತಿ, ಗೀತಿ ನೋಡದೆಯೇ ಮೂರ್ಖತನವಾಯಿತು. ನೀನೆಷ್ಟು ನಕ್ಕು ಮಾತನಾಡಿದರೂ ನಿನ್ನ ಹುಟ್ಟು ಗುಣ ಹೋಗಲಾರದು" (ಬತ್ತದ ತೊರೆ ಪು. ೨೦೧) ಹುಟ್ಟಿಗೆ ಆಯ್ಕೆಯಲ್ಲ. ಜಾತಿಯ ಸಂದರ್ಭದಲ್ಲಿಯೂ ಆಯ್ಕೆಯಲ್ಲ. ನನಗೆ ಈ ಜಾತಿಯನ್ನೇ ಕೊಡಿ ಎಂದು ಅರ್ಜಿಸಲ್ಲಿಸುವಂತಿಲ್ಲ. ಆದರೆ ವರ್ಗ ಮತ್ತು ಅದರಿಂದ ಉಂಟಾಗಬಹುದಾದ ಮನೋಧರ್ಮಕ್ಕೆ ಆಯ್ಕೆಗಳಿಗಿವೆ. ಪಡೆದುಕೊಳ್ಳಬಹುದಾದ ಸಂಗತಿಗಳಿವು. ಈ ಕಾದಂಬರಿಯು

ಸೂಚಿಸುವಂತೆ ಉಚ್ಚ ಜಾತಿಗೆ ಸೇರಿದ ಗಾಂವಕಾರನು ಗುಣ ಸ್ವಭಾವದಲ್ಲಿ ಒಳ್ಳೆಯವನಲ್ಲ. ಕೇಡಿನ ಗುಣವುಳ್ಳವನು. ವೇಶ್ಯೆಯಲ್ಲಿ ಹುಟ್ಟಿದ ವಿನತೆಯು ಒಳ್ಳೆಯವಳು. ಹುಟ್ಟುಗುಣಕ್ಕೂ ಸಂಬಂಧವಿಲ್ಲವೆಂಬ ವೈಚಾರಿಕ ಪ್ರಣಾಲಿಯು ಇಲ್ಲಿ ಕೆಲಸ ಮಾಡಿದೆ. ಈ ಅಂತರ ಜಾತಿಯ ಮದುವೆಯು ಜರಗುವುದು ನಗರದಲ್ಲಿ, ಇಲ್ಲಿಯ ಸಮಸ್ಯೆಯು ಕೂಡಾ ಆರ್ಥಿಕ ವಿಷಯಗಳಿಗೆ ಸಂಬಂಧಿಸಿದೆ. ನಮ್ಮಲ್ಲಿಯ ನಗರ ಜೀವನ ಕ್ರಮವು ರೂಪಿಸುವ ಆಲೋಚನಾಕ್ರಮವು ಈ ಕಾದಂಬರಿಯ ಮುಖ್ಯ ಪ್ರವಾಹದಲ್ಲಿ ಅಡಕಗೊಂಡಿದೆ. ಮಧ್ಯಮ ವರ್ಗದ ಜೀವನದಲ್ಲಿ ನಡೆಯಬಹುದಾದ ಕೆಲವು ಸಂಗತಿಗಳ ಮೂಲಕವೇ ಕಾರಂತರು ಈ ಕಾದಂಬರಿಯ ತಾತ್ತ್ವಿಕ ಚೌಕಟ್ಟನ್ನು ನಿರ್ವಹಿಸಿದ್ದಾರೆ. ನಾಗರೀಕ ಜಗತ್ತಿನಲ್ಲಿ ಉಂಟಾಗುವ ಸಂಬಂಧಗಳು ಮದುವೆಯ ಮೇಲೆ ಬೀರುವ ಪ್ರಭಾವದ ಕುರಿತು ಸ್ವಲ್ಪ ವ್ಯಂಗ್ಯಾತ್ಮಕವೆನ್ನಬಹುದಾದ ಧೋರಣೆಯಿಂದಲೇ ಕಾರಂತರು ಇಲ್ಲಿ ಬರೆಯುತ್ತಾರೆ. ವೈಯಕ್ತಿಕ ಸಂಬಂಧಗಳ ಮೂಲಕವೇ ಸ್ಥಾಪಿತವಾಗುವ ಈ ರೀತಿಯ ಮದುವೆಗಳು ವ್ಯವಸ್ಥೆಯನ್ನು ಪ್ರಶ್ನಿಸುವ ರೀತಿಯಲ್ಲಿ ಇರುವುದಿಲ್ಲ. ಇದು ಕೇವಲ ಖಾಸಗಿ ಮೈತ್ರಿಯ ಸ್ವರೂಪದ್ದು. ಕಾರಂತರು ಈ ಕಾದಂಬರಿಯಲ್ಲಿ ಮುಖ್ಯವಾಗಿ ಹೇಳುವುದು ಇದನ್ನು.

ಕಾರಂತರ "ಇನ್ನೊಂದೇ ದಾರಿ" ಕಾದಂಬರಿಯಲ್ಲಿ ಶ್ರೀರಾಮ ಪರಜಾತಿಗೆ ಸೇರಿದ ಚಂಪೆಯೊಡನೆ ವಿವಾಹವಾಗುತ್ತಾನೆ. ಈ ವಿವಾಹವು ಸಾಂಪ್ರದಾಯಿಕವಾದ ರೀತಿಯಲ್ಲ. ಇವರಿಂದ ಶ್ರೀರಾಮನ ತಾಯಿಗೆ ಮಾನಸಿಕ ಆಘಾತ ಉಂಟಾಗುತ್ತದೆ. ಅಂತರ ಜಾತಿಯ ವಿವಾಹಕ್ಕೆ ಗೋದಾನವೂ ಪ್ರಾಯಶ್ಚಿತ್ತ ಪರಿಹಾರವಾಗುತ್ತದೆ. ಈ ಸಂಬಂಧದಿಂದ ಬಿರುಕು ಅನಂತರ ಸ್ವೀಕೃತಿಯ ಪ್ರಕ್ರಿಯೆಗಳು ಜರುಗುತ್ತವೆ. ಈ ಕಾದಂಬರಿಯು ಅಂತರಜಾತಿಯ ವಿವಾಹದ ಪರಿಣಾಮಗಳನ್ನು ವಿವರಿಸುತ್ತದೆ. ರಿಜಿಸ್ಟರ್ಡ್ ಮದುವೆಯ ಪರಿಶ್ರಮ ರಿಜಿಸ್ಟರ್ಡ್ ಮದುವೆಯು ಆಧುನಿಕ, ಸಂವಿಧಾನ ಬದ್ಧವಾದ ಪ್ರಕ್ರಿಯೆಯನ್ನು ಸೂಚಿಸುತ್ತಿದ್ದರೆ ಅಂತರ ಜಾತಿಯ ವಿವಾಹಕ್ಕೆ ಪ್ರಾಯಶ್ಚಿತ್ತ ರೂಪವಾಗಿ ಜರುಗುವ ಗೋದಾನವು ಸಾಂಪ್ರದಾಯಿಕ ಸಮಾಜದ ರೀತಿ ನೀತಿಗಳನ್ನು ವಿವರಿಸುತ್ತವೆ. ಒಂದು ಆಧುನಿಕತೆಯನ್ನು ಸೂಚಿಸುತ್ತಿದ್ದರೆ ಮತ್ತೊಂದು ಸಾಂಪ್ರದಾಯಿಕವಾದ ಸಮಾಜದ ತಲ್ಲಣ ಮತ್ತು ಅದರ ಪರಿಹಾರವನ್ನು ಸೂಚಿಸುತ್ತದೆ. ವೈಯಕ್ತಿಕ ಮಟ್ಟದಲ್ಲಿ ಜರುಗುವ ಬದಲಾವಣೆ ಮತ್ತು ಭಾವನಾತ್ಮಕ ಸಂಬಂಧಗಳ ನಡುವಣ ಘರ್ಷಣೆಯನ್ನು ಇದು ಪ್ರತೀಕ್ರಿಯಿಸುತ್ತದೆ. ವ್ಯವಸ್ಥೆಯನ್ನು ಪೂರ್ಣ ರೂಪವಾಗಿ ಪ್ರಶ್ನಿಸಲಾಗದ ನೆಲೆಯಿದು. ಸಾಮಾಜಿಕ ದ್ರೋಹವೆಂದು ಜರುಗುವುದು ಖಾಸಗಿ ಮಟ್ಟದಲ್ಲಿ ಮಾತ್ರ. ಸಾರ್ವತ್ರಿಕ ಮಟ್ಟದಲ್ಲಿ ಇದು ಯಾವುದೇ ರೀತಿಯ ಬದಲಾವಣೆಯನ್ನು ತರುವುದಿಲ್ಲ.

'ಚೋಮನದುಡಿ' ಕಾದಂಬರಿಯಲ್ಲಿ ಪಾದ್ರಿಗಳು ಒಡ್ಡಿದ ದುಡ್ಡು ಭೂಮಿಯ ಆಸೆಗಾಗಿ ಕ್ರಿಶ್ಚಿಯನ್ ಹುಡುಗಿಯೊಬ್ಬಳನ್ನು ಮದುವೆಯಾಗಿ ಗುರುವನು ಓಡಿ ಹೋಗುತ್ತಾನೆ. ಅಂತರ ಧರ್ಮೀಯ ವಿವಾಹ ಇದು ಕ್ರಿಶ್ಚಿಯನ್ ಮಿಶನರಿಗಳು ಯಾವ ರೀತಿಯ ಕೆಲಸವನ್ನು ಮಾಡುತ್ತಿದ್ದವು ಎನ್ನುವುದನ್ನು ಕಾರಂತರು ಇಲ್ಲಿ ವಿವರಿಸುತ್ತಾರೆ.. ಮಿಶನರಿ ಸಂಸ್ಕೃತಿಯು ಮೊದಲು ತನ್ನ ಪ್ರಭಾವವನ್ನು ಬೀರಲು ಪ್ರಯತ್ನಿಸಿರುವುದು ಕೆಳವರ್ಗದ ಜೀವನ ಕ್ರಮದ ಮೇಲೆ. ಮಿಶನರಿ ಸಂಸ್ಕೃತಿಯು ಸ್ಥಳೀಯ ಸಂಕಪ್ಪಯ್ಯನ ಬೆನ್ನ ಹಿಂದಿರುವ ಸಂಸ್ಕೃತಿಗಿಂತ ಶ್ರೇಷ್ಠವಾಗಿ ಗುರುವನಿಗೆ

ಕಂಡುದರಲ್ಲಿ ಆಶ್ಚರ್ಯವಿಲ್ಲ. ಆಸ್ತಿ ಮತ್ತು ಮದುವೆ ಎರಡೂ ಈ ಸಂದರ್ಭದಲ್ಲಿ ಪರಸ್ಪರ ಸಂಬಂಧಿತ ವಿಚಾರವಾಗಿದೆ. ಕಾರಂತರು ಇವೆರೆಡನ್ನೂ ಸಂಯೋಜಿಸಿ ಧಾರ್ಮಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಸೂಚಿಸಿದ್ದಾರೆ.

ಗೊರೂರು ರಾಮಸ್ವಾಮಿ ಅಯಂಗಾರರ 'ಹೇಮಾವತಿ'ಯಲ್ಲಿ ಬ್ರಾಹ್ಮಣ ಹುಡುಗ (ವಾಸು) ಗಾನಶಾರದೆಯನ್ನು ಮದುವೆಯಾಗುತ್ತಾನೆ. ಈ ಮದುವೆಯು ಸಾಂಪ್ರದಾಯಿಕವಾದುದಲ್ಲ. ಇದು ಪ್ರೇಮ ವಿವಾಹ. ಕಾದಂಬರಿಯಲ್ಲಿ ಸೂಚಿತವಾದಂತೆ ಹರಿಜನ ಹುಡುಗಿ ತನ್ನ ಮೂಲ ಸಾಂಸ್ಕೃತಿಕ ಬೇರುಗಳನ್ನು ಕಡಿದುಕೊಂಡಿದ್ದಾಳೆ. ಕಾದಂಬರಿಯ ಉದ್ದಗಲಕ್ಕೂ ಗಾಂಧಿಯುಗದ ಆದರ್ಶವೇ ಎದ್ದು ಕಾಣುತ್ತದೆ. ವಾಸುವಿಗೆ ತಾನು ಹರಿಜನ ಸ್ತ್ರೀಯನ್ನು ಮದುವೆಯಾಗಬೇಕೆಂಬುದು ತತ್ವಪೂರ್ಣವಾಗಿ ಒಪ್ಪಿಗೆಯಾದರೂ ಗಾನಶಾರದೆಯಲ್ಲದೆ ಬೇರೊಬ್ಬ ಹರಿಜನ ಕನ್ಯೆಯನ್ನು ತಾನು ಮದುವೆಯಾಗುತ್ತಿದ್ದೇನೆ ಎಂಬುದು ಅವನಿಗೇ ಸಮಸ್ಯೆಯಾಗಿತ್ತು ಎನ್ನುವ ವಿವರವೇ ಈ ಕಾದಂಬರಿಯಲ್ಲಿ ಅಂತರಜಾತಿಯ ವಿವಾಹದ ಸ್ವರೂಪವನ್ನು ತಿಳಿಸಿಕೊಡುತ್ತದೆ. ಹರಿಜನ ಕನ್ಯೆಯ ಮೂಲ ಹೆಸರು ಬದಲಾಗುತ್ತದೆ. ಹೆಸರು ಬದಲಾಗುವುದರೊಂದಿಗೆ ಅವಳ ಜೀವನ ಕ್ರಮವೂ ಬದಲಾಗುತ್ತದೆ. ಜಾತಿ ಪಾವಿತ್ರ್ಯದ ದೃಷ್ಟಿಯಿಂದಲೇ ಯೋಚಿಸುವ ವಾಸುವಿನ ತಂದೆ ಗಾನಶಾರದೆಯಲ್ಲಿ ಹೇಳುವ ಮಾತು ಇಲ್ಲಿ ಉಲ್ಲೇಖನೀಯ. "ಅಮ್ಮ ನೀನು ಹೊಲತಿಯಾದರೂ ನಿನ್ನ ಕೈ ಮುಗಿಯುತ್ತೇನೆ. ನಿನ್ನ ಕಾಲು ಮುಟ್ಟುತ್ತೇನೆ. ನಾನು ಹಳೆಯ ಕಾಲದವನು ನನ್ನ ಸಂಸಾರವನ್ನು ಪಿತೃಗಳನ್ನು ನರಕದಲ್ಲಿ ಅದ್ದಬೇಡ. ನಿನ್ನನ್ನು ಮದುವೆಯಾಗಲು ಸಾವಿರಾರು ಲಕ್ಷಾಧಿಪತಿಗಳು ಸಿದ್ಧರಿರುವಾಗ ಈ ಹಳ್ಳಿಯ ಬ್ರಾಹ್ಮಣರನ್ನು ಜಾತಿಕೆಡಿಸಿ ನಮ್ಮ ಕರುಳಿನಲ್ಲಿ ಯಾಕೆ ಕಿಚ್ಚು ಇಕ್ಕುತ್ತಿ" (ಪು.೨೨೨) ಮೇಲು ಜಾತಿಯ ಜನಾಂಗವು ಅಂತರಜಾತಿಯ ವಿವಾಹಕ್ಕೆ ಸಮ್ಮತಿಸದೇ ಇರುವುದಕ್ಕೆ ಅದರದ್ದೇ ಆದ ತಾರ್ಕಿಕ ಕಾರಣಗಳನ್ನು ಮಂಡಿಸುತ್ತದೆ. ಕೆಳವರ್ಗದ ಸಂಸ್ಕೃತಿಯನ್ನು ತುಳಿಯುವುದಕ್ಕೆ ವೈದಿಕ ಸಂಸ್ಕೃತಿಯು ಬಳಸಿಕೊಂಡ ಸ್ವರ್ಗ - ನರಕದ ಪರಿಕಲ್ಪನೆಯೇ ಇಲ್ಲಿ ಬಳಕೆಗೊಂಡಿದೆ. ಗೊರೂರು ಅವರು ಈ ಸಂಸ್ಕೃತಿಯ ಪರವಾಗಿ ನಿಂತಿಲ್ಲವೆಂಬುದು ಗಮನಾರ್ಹ. ಅಂತರಜಾತಿಯ ವಿವಾಹವು ಜರುಗದಂತೆ ಬ್ರಾಹ್ಮಣ ಜನಾಂಗವು ತನ್ನ ಪಾವಿತ್ರ್ಯವನ್ನು ಉಳಿಸಿಕೊಳ್ಳಲು ವಿಭಿನ್ನ ರೀತಿಯಲ್ಲಿ ತೊಡಗಿಕೊಳ್ಳುವುದನ್ನು ಗೊರೂರು ವಿವರಿಸುತ್ತಾರೆ. ಗಾನಶಾರದೆಗೆ ದುಡ್ಡಿನ ಆಮಿಷವನ್ನು ತೋರಿಸುವುದು, ನರಕದ ಭಯವೊಡ್ಡುವುದು ಈ ರೀತಿಯ ಕೇಡಿನ ಅಂಶಗಳನ್ನೇ ಸೂಚಿಸುತ್ತವೆ. ಸಾಂಸ್ಕೃತಿಕ ಭಿನ್ನತೆ ಮತ್ತು ಅವುಗಳ ನಡುವೆ ಇರಬೇಕಾದ ಸಹಕಾರವನ್ನು ಗೊರೂರು ಆದರ್ಶವಾದಿ ನಿಲುವಿನಿಂದ ವಿವೇಚಿಸುತ್ತಾರೆ. ಈ ಕಾದಂಬರಿಯಲ್ಲಿ ಗಾಂಧಿ ಹೇಳುವ ಮಾತು ಕೂಡಾ ಇದನ್ನೇ ಸೂಚಿಸುತ್ತದೆ. "ವರ್ಣಾಶ್ರಮಗಳನ್ನು ಅನೇಕ ಜಾತಿ ಆಶ್ರಮದಲ್ಲಿ ನಡೆಯಬೇಕಾದುದಿಲ್ಲವೆಂದು ನಾನು ಹಿಂದೆಯೇ ತೀರ್ಮಾನಿಸಿದೆ. ಅಂತರ ಜಾತಿಯ ವಿವಾಹದಲ್ಲಿಯೂ ಆಶ್ರಮವೇ ಮುಂದಾಳುತನವನ್ನು ವಹಿಸಬೇಕು" (ಪು. ೨೨೩) ಈ ಕಾದಂಬರಿಯಲ್ಲಿ ಜರುಗುವ ಮದುವೆಯು ಕೂಡಾ ಆಶ್ರಮದಲ್ಲಿಯೇ ಜರುಗುತ್ತದೆ. ಸರಳ ಮದುವೆಯ ಅನಂತರ ಅರುಂಧತಿ ನಕ್ಷತ್ರವನ್ನು ವಧೂವರರು ವೀಕ್ಷಿಸುತ್ತಾರೆ. ಇದರ ಮೂಲಕ ಭಾರತೀಯ ಮೂಲದ, ಮೇಲುವರ್ಗದ ಚಿಂತನಾಕ್ರಮವು ಪುನರಾವರ್ತಿತ ಕ್ರಿಯೆಯಾಗಿ ಇಲ್ಲಿಯೂ ತನ್ನ ತಾತ್ತ್ವಿಕ ರೂಪುರೇಷೆಗಳನ್ನು ಆಚರಣೆಗಳಲ್ಲಿ ಪಡೆದುಕೊಂಡಿದೆ. ಆದರೆ ಗ್ರಾಮೀಣ

ಸಂಸ್ಕೃತಿಯಲ್ಲಿ ಉಂಟಾಗುತ್ತಿರುವ ಬದಲಾವಣೆಯನ್ನು ಗೊರೂರು ಗಮನಿಸಿದ್ದಾರೆ. ಗ್ರಾಮೀಣ ಸಂಸ್ಕೃತಿಯ ನಡುವೆ ರೂಪುಗೊಳ್ಳಬೇಕಾದ ಆದರ್ಶವು ಗೊರೂರು ಅವರಿಗೆ ಮುಖ್ಯವಾಗಿದೆ. ಪ್ರಧಾನವೆಂದು ಕರೆದ ಸಂಸ್ಕೃತಿಯು ತಾನು ಶ್ರೇಷ್ಠವೆಂದು ಕರೆದುಕೊಳ್ಳಬೇಕಾದ ಅಗತ್ಯವಿಲ್ಲ. ಹಾಗೆಯೇ ತನ್ನ ಉದಾರವಾದಿ ನೆಲೆಯಿಂದ ಗ್ರಾಮೀಣ ಸಂಸ್ಕೃತಿಯು ಹೊಸದನ್ನು ಪಡೆದುಕೊಳ್ಳಬಹುದು. ಭಾರತೀಯತೆಯ ಲಕ್ಷಣವೆಂದು ಕರೆಯಬಹುದಾದ ನೈತಿಕ ಹಾಗೂ ತಾತ್ತ್ವಿಕ ದೃಷ್ಟಿಕೋನಗಳೇ ಈ ಕಾದಂಬರಿಯ ಅಂತರಂಗದಲ್ಲಿ ಪ್ರವಹಿತಗೊಂಡಿದೆ. ಈ ಕಾದಂಬರಿಯು ಎತ್ತಿ ಹಿಡಿಯುವ ಮೌಲ್ಯವು ಮುಖ್ಯವಾಗಿ ಸಾಮಾಜಿಕ ನ್ಯಾಯಕ್ಕೆ ಸಂಬಂಧಿಸಿದೆ. ಹರಿಜನ ಹುಡುಗಿಯೊಬ್ಬಳು ಗಾನ ಶಾರದೆಯಾಗಿ ಪರಿವರ್ತನೆಗೊಳ್ಳುವುದು ಇದನ್ನು ಸೂಚಿಸುತ್ತದೆ. ಗಾನ ಶಾರದೆಯು ಕೇವಲ ಹೊಲತಿಯಾಗಿಯೇ ಉಳಿದಿಲ್ಲ. ಅವಳ ಹಾಡು ಅವಳನ್ನು ಗಾನವಿ ಶಾರದೆಯಾಗಿ ಬದಲಾಯಿಸಿದೆ. ಹಾಗೆಯೇ ಹಳೆಯ ಸಾಂಪ್ರದಾಯಿಕ ಆಚರಣೆ ಬದ್ಧ ಬ್ರಾಹ್ಮಣ ಜಾತಿಯೂ ಕೂಡಾ ಈ ಕಾದಂಬರಿಯ ಜಗತ್ತಿನಲ್ಲಿ ಬದಲುಗೊಂಡಿದೆ. ಬ್ರಾಹ್ಮಣ ಜಾತಿಯು ತನ್ನ ಆರ್ಥಿಕ ಭದ್ರತೆಗಾಗಿ ಕೃಷಿಯ ಕಡೆಗೆ ತೆರಳಿದ್ದನ್ನು ಕಾರಂತರ ಕಾದಂಬರಿಗಳು, ಗೊರೂರು ಅವರ ಕಾದಂಬರಿಗಳು ವಿವರಿಸುತ್ತವೆ. ಈ ಇಬ್ಬರೂ ಕಾದಂಬರಿಕಾರರು ವಿವರಿಸುವ ನೆಲೆಗಳು ಕೇವಲ ಒಂದು ವಿಷಯಕ್ಕೆ ಬದ್ಧವಾಗಿಲ್ಲ ಎಂಬುದನ್ನು ಒಪ್ಪಿಕೊಂಡರೂ ಸಾಮಾಜಿಕ ನ್ಯಾಯ ಸಾಮಾಜಿಕ ಸ್ಥಿತ್ಯಂತರದ ಸನ್ನಿವೇಶದಲ್ಲಿಯೇ ಹುಟ್ಟಿಕೊಂಡಿದೆಯೆಂಬುದನ್ನು ಮರೆಯುವಂತಿಲ್ಲ. ಕುಟುಂಬ, ಆಸ್ತಿ, ಬಂಧುತ್ವ, ಪಾವಿತ್ರ್ಯ, ಜಾತಿ ಇವುಗಳೆಲ್ಲಾ ಪರಸ್ಪರ ಸಂಬಂಧಿತವಾದ ವಿಚಾರಗಳೇ ಆಗಿವೆ. ಮದುವೆಯಂಥಾ ಸಂಸ್ಥೆಗಳು ಇದನ್ನೇ ಸಂರಕ್ಷಿಸುತ್ತವೆ. ರಾಷ್ಟ್ರೀಯ ಆಂದೋಲನದ ಸನ್ನಿವೇಶದಲ್ಲಿ ಪ್ರಾರಂಭಗೊಂಡ ಮುಖ್ಯ ಪರಿಭಾಷೆಗಳಾದ 'ಜಾತ್ಯಾತೀತ' ಮತ್ತು ವರ್ಗಾತೀತ ಸಮಾಜದ ಕನಸುಗಳಿಗೆ ಈ ರೀತಿಯ ಕಾದಂಬರಿಗಳು ಈ ರೀತಿಯಲ್ಲೇನೆ ಪ್ರತಿಕ್ರಿಯಿಸಿದವು. ಹಳೆಯ ಸಾಮಾಜಿಕ ಸ್ಥಿತಿಯೊಂದರಲ್ಲಿ ಬ್ರಾಹ್ಮಣನೊಬ್ಬ ತಾಳೆ ಮರದಿಂದ ಕಳ್ಳನ್ನು ಇಳಿಸಬಲ್ಲನೆ? ಹಳೆಯ ಸಮಾಜದಲ್ಲಿ ಈ ಕನಸೂ ಸಾಧ್ಯವಿಲ್ಲ. ಆದರೆ, ಆಧುನಿಕ ಸಮಾಜದಲ್ಲಿಯೂ ಕನಸೂ ಸಾಧ್ಯ. ಯಾಕೆಂದರೆ ಈಗ ಅನೇಕ ಸಂದರ್ಭದಲ್ಲಿ ಮಾರುಕಟ್ಟೆಯ ಸಂಸ್ಕೃತಿಯೊಳಗೆ ಲಾಭದ ಉದ್ದೇಶವೂ ಇದೆಯಲ್ಲವೆ?

ಭಾರತೀಯ ಸಮಾಜದಲ್ಲಿ ಮದುವೆಯೆಂಬುದು ಒಂದು ನೈತಿಕ, ತಾತ್ವಿಕ ಪರಿಭಾಷೆಯೂ ಹೌದು ಹಾಗೆಯೇ ಜಾತಿ ಆಧಾರಿತ ವ್ಯವಸ್ಥೆಯೊಳಗೆ ಜಾತಿ ಮತ್ತು ಕೆಳಜಾತಿಗಳ ನಡುವಣ ಸಂಬಂಧವು ಆಳುವ ಆಳಿಸಿಕೊಳ್ಳುವನ ಪರಿಭಾಷೆಯಿಂದ ಆವೃತವಾಗಿರುತ್ತದೆ. ಆಳುವ ಶಕ್ತಿಯೆಂದರು ಕೆಳಜಾತಿಯು ಆರ್ಥಿಕ ಭದ್ರತೆಯು ಇಲ್ಲದ ದೆಸೆಯಿಂದಲೇ ಗುಲಾಮನಾಗಿರುವುದು ಅನಿವಾರ್ಯವಾಗಿ ಬಿಡುತ್ತದೆ. ''ದಾಟು' ಕಾದಂಬರಿಯ ಬೆಟ್ಟಯ್ಯನು ಅಧಿಕಾರವಿದ್ದರೂ ವಿನೀತವಾಗಿಯೇ ಉಳಿಯುತ್ತಾನೆ. 'ದಾಟು' ಕಾದಂಬರಿಯಲ್ಲಿ ಜಾತಿಗೂ ಸ್ಥಾನಕ್ಕೂ ಸಂಬಂಧವನ್ನು ಕಲ್ಪಿಸಲಾಗಿದೆ. ಇದು 'ದಾಟು' ಕಾದಂಬರಿಯೊಂದರ ಸಮಸ್ಯೆಯಲ್ಲಿ ಹೆಚ್ಚಿನ ಸಾಹಿತ್ಯ ಕೃತಿಗಳು ಜಾತಿ ಮುಖಾಂತರವೇ ಸ್ಥಾನ ನಿರ್ದೇಶನವನ್ನು ಮಾಡುವ ಪ್ರಯತ್ನವನ್ನು ಮಾಡಿದೆ. ಆದರೆ 'ದಾಟು' ಕಾದಂಬರಿಯಲ್ಲಿ ಇದನ್ನು ದೊಡ್ಡ ಸಮಸ್ಯೆಯ ರೀತಿಯಲ್ಲಿ ಇಡಲಾಗಿದೆ. ಕೆಳಜಾತಿಯ ಮೋಹನ ದಾಸನದು ತೀವ್ರತೆಯ ಮನೋಭಾವ. ಆದರೆ ಮೋಹನದಾಸನದು ಕ್ರಾಂತಿಕಾರಿ ವ್ಯಕ್ತಿತ್ವ ವಿಫಲವಾಗುತ್ತದೆ.

ಅವನ ತಂಗಿ ಬ್ರಾಹ್ಮಣ ಹುಡುಗಿಯಂತೆ ವರ್ತಿಸುತ್ತಾಳೆ. ಒಕ್ಕಲಿಗ ಹುಡುಗನನ್ನು ಮದುವೆಯಾಗದೆ ಸಾಯುತ್ತಾಳೆ. ಒಕ್ಕಲಿಗ ಹುಡುಗನದು ಒಂದು ರೀತಿಯಾದರೆ, ಅವನನ್ನು ಮದುವೆಯಾಗುವುದು ಸತ್ಯ (ಬ್ರಾಹ್ಮಣ ಜನಿವಾರ ತೊಟ್ಟುಕೊಂಡು ಬಿಡುತ್ತಾಳೆ.) ಅಂತರಜಾತಿಯ ವಿವಾಹದ ಬಗ್ಗೆ ಎಸ್.ಎಲ್. ಭೈರಪ್ಪ ಹೀಗೆ ಸಮಾಜಾಯಿಷಿ ಕೊಟ್ಟು ಬಿಡುತ್ತಾರೆ. ಭೈರಪ್ಪರ 'ತಬ್ಬಲಿಯು ನೀನಾದೆ ಮಗನೆ' ಕೃತಿಯೂ ಕೂಡಾ ಹೀಗೆಯೇ ಬಹಳಷ್ಟು ವರ್ಷಗಳ ಹಿಂದಕ್ಕೆ ಹೋಗುತ್ತದೆ. ಸರಳೀಕರಣದ ಅಪಾಯಗಳಿಗೆ ಒಳ್ಳೆಯ ಮಾದರಿಗಳಿವು.

ಹುಟ್ಟಿಗೆ ಮತ್ತು ಮದುವೆಗೆ ಸಂಬಂಧ ಕಲ್ಪಿಸಿರುವುದನ್ನು 'ಮುಸ್ಸಂಜೆಯ ಕಥಾ ಪ್ರಸಂಗದಲ್ಲಿ ಮಮ್ತಾಜ್ ಮತ್ತು ಉಡುಪರ ಬಗೆಗಿನ ಪ್ರತಿಕ್ರಿಯೆಯಲ್ಲಿ ಕಾಣಬಹುದು. 'ಉಡುಪ ಬ್ರಾಹ್ಮಣ, ಅವನ ಹೆಂಡತಿ ತುರುಕರವಳು, ಅವರಿಬ್ಬರು ದಂಪತಿಗಳು ಎನ್ನುವುದೇ ಸೋಜಿಗದ ವಿಷಯವಾಗಿದ್ದ ರಂಗವ್ವನಿಗೆ ಆ ವಿಚಿತ್ರ ಗಂಡು ಹೆಣ್ಣನ್ನು ಮನೆಯಲ್ಲಿ ಎಲ್ಲಿಡುವುದು ಮತ್ತು ಅವರಿಗೆ ಎಲ್ಲ, ಯಾತರಲ್ಲಿ ಉಣ್ಣಲು ನೀಡುವುದು ಇತ್ಯಾದಿ ಪ್ರಶ್ನೆಗಳು ಎದುರಾದವು. ಅದಕ್ಕಿಂತ ಹೆಚ್ಚಾಗಿ ಆ ಇಬ್ಬರೊಡನೆ ಹ್ಯಾಗೆ ಮಾತನಾಡುವುದು ಎಂಬ ದಿಗಿಲು ಅವಳಲ್ಲಿತ್ತು" (ಮುಸ್ಸಂಜೆಯ ಕಥಾ ಪ್ರಸಂಗ, ಪು. ೧೬೧) ನಗರದಿಂದ ಬಂದ ಉಡುಪನ ಬಗೆಗೆ ರಂಗವ್ವನ ಆತಂಕವು ಸಹಜವಾದುದು. ತನ್ನ ಜಾತಿಗಿಂತ ಭಿನ್ನವಾದ ಮಂಜನ ಜೊತೆಗೆ ತನ್ನ ಮಗಳ ಮದುವೆಯನ್ನು ನೆರವೇರಿಸುವುದಕ್ಕೆ ರಂಗವ್ವನು ಒಪ್ಪುವುದಿಲ್ಲ. ಇಡಯ ಪ್ರಕರಣದಲ್ಲಿ ಕೆಲವು ರೀತಿಯ ಆತಂಕಗಳು ಕೆಲಸ ಮಾಡಿವೆ. ಸಾಂಪ್ರದಾಯಿಕ ಮದುವೆಯನ್ನು ಇಡಿಯ ಸಮಾಜವು ಶ್ರೇಷ್ಠವಾದುದೆಂದು ನಂಬುತ್ತದೆ. ಇದಕ್ಕೆ ಕಾರಣವೆಂದು ಪ್ರತಿಯೊಂದು ಜಾತಿಯು ಮೂಲದಲ್ಲಿ ನಿರ್ದಿಷ್ಟವಾದ ಅಹಂಕಾರವೊಂದರ ಮೂಲಕ ತನ್ನ ಜಾತಿಯನ್ನು ಕಾಪಾಡಿಕೊಳ್ಳುವ ಪ್ರಯತ್ನವನ್ನು ಮಾಡಲೆತ್ನಿಸುತ್ತದೆ. ಆದರೆ ಒಮ್ಮೆ ಈ ರೀತಿಯ ಅಂತರಜಾತಿಯ ವಿವಾಹ ಜರುಗಿ ಬಿಟ್ಟರೆ ಅನಂತರದಲ್ಲಿ ಸಮಾಜವು ಅದನ್ನು ಒಪ್ಪಿಕೊಂಡು ಬಿಡುತ್ತದೆ. ಉದಾಹರಣೆಗೆ 'ಭುಜಂಗಯ್ಯನ ದಶಾವತಾರ' ಭುಜಂಗಯ್ಯ ಲಿಂಗಾಯತನಾದರೂ ಎರಡನೆಯ ಮದುವೆಯನ್ನು ಬಳೆಮಾರುವ ಸುಶೀನ ಜೊತೆ ಆಗುತ್ತಾನೆ. ಈ ಮದುವೆ ದೇವಸ್ಥಾನದಲ್ಲಿ ಜರುಗುತ್ತದೆ. ಈ ಕಾದಂಬರಿಯಲ್ಲಿ ವಚನ ಪರಂಪರೆಯ ಬಗೆಗೂ ಪ್ರತಿಕ್ರಿಯೆಯಿದೆ. ಹಾಗೆಯೇ ಇದು ಜರುಗುವುದು ದೇವಸ್ಥಾನದಲ್ಲಿ. ತನ್ನ ಸಿಂಧುತ್ವವನ್ನು ಹೀಗೆ ಪಡೆದುಕೊಂಡಿದೆ, ದೇವಸ್ಥಾನದಲ್ಲಿ ಜರುಗುವ ಮದುವೆಯು ಆಧುನಿಕ ಹಿಂದೂ ಮ್ಯಾರೆಜ್ ಆಕ್ಟ್‌ನ ಪ್ರಕಾರ ಸಮ್ಮತವಾದುದು.

ಸಂಸ್ಕೃತಿ, ಉದ್ಯೋಗ, ಅಂತರ್ಮತೀಯ ಮದುವೆ, ಅದು ಉಂಟುಮಾಡುವ ಆತಂಕಗಳ ಕುರಿತು ನಮಗೆ ವಿಶುಕುಮಾರ 'ಕರಾವಳಿ' ಕಾದಂಬರಿಯು ವಿವರಿಸುತ್ತದೆ. ಮೊಗವೀರ ಜನಾಂಗ ಹುಡುಗಿಯೊಬ್ಬಳು ಮುಸ್ಲಿಂ ಯುವಕನನ್ನು ಮದುವೆಯಾಗುತ್ತಾಳೆ. ಇದರಿಂದ ಎರಡು ಕೋಮುಗಳಲ್ಲಿ ಸಂಘರ್ಷದ ವಾತಾವರಣವು ನಿರ್ಮಾಣಗೊಳ್ಳುತ್ತಿದೆ. ಬೊಳುವಾರು ಮಹಮ್ಮದ್ ಕುಂಞಯವರ 'ಜೆಹಾದ್' ಕಾದಂಬರಿಯಲ್ಲಿಯೂ ಈ ರೀತಿಯ ನಿಲುವು ಇದೆ. ಮುಸ್ಲಿಂ ಹುಡುಗ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗುವ ವಿಷಯವು ತೆಳುವಾದ ನಿರೂಪಣೆಯೊಂದಿಗೆ ಪ್ರತಿಪಾದಿತವಾಗಿದೆ. ಅನಂತಮೂರ್ತಿಯವರ 'ಭಾರತೀಪುರ' ಕಾದಂಬರಿಯಲ್ಲಿಯೂ ಅನಂತಮೂರ್ತಿಯ ವಿವರಗಳಿವೆ. ಈ ರೀತಿಯ ಸಾಹಿತ್ಯ ಕೃತಿಗಳು 'ಸಂಪರ್ಕ' (ಪರಿಚಯ) ಪ್ರೇಮ, ಮದುವೆಯನ್ನು ಪರಸ್ಪರ ಸಂಯೋಜಿಸಿ ತಮ್ಮ ವಿಚಾರಗಳನ್ನು ಮಂಡಿಸಿವೆ.

ದೇಸಾಯಿಯವರು ಕಾದಂಬರಿಗಳಲ್ಲಿ ನಡೆಯುವ ದಾಂಪತ್ಯ ಜೀವನದ ಚೌಕಟ್ಟು ಅಂತರಜಾತಿಯ ವಿವರಗಳನ್ನು ಒಳಗೊಂಡಿದೆ. ದೇಸಾಯಿಯವರ ಕಾದಂಬರಿಗಳ ಜಗತ್ತು ನಿಂತಿರುವುದು ಆಧುನಿಕ ನಗರಗಳಲ್ಲಿ ಆಧುನಿಕ ನಗರ ಜಗತ್ತು ಸೃಷ್ಟಿಸುವ ಸಂಬಂಧಗಳು ದೇಸಾಯಿಯವರಿಗೆ ಮುಖ್ಯವಾಗಿದೆ. ಸಾಂಸ್ಕೃತಿಕ ಪಲ್ಲಟದ ಹಿನ್ನೆಲೆಯಲ್ಲಿ ವಿವಾಹಗಳು ನಡೆಯುವುದರಿಂದ ಹಳ್ಳಿಯ ಜೀವನ ಕ್ರಮದಲ್ಲಿ ಜರುಗುವ ಮೇಲೆ - ಕೀಳು ಸಂಬಂಧಗಳು ಇಲ್ಲಿ ಮುಖ್ಯವಲ್ಲ. ದೇಸಾಯಿಯವರು ಹಳ್ಳಿಗಿಂತ ಭಿನ್ನವಾದ ಪರಿಶ್ರಮವು ನಗರದಲ್ಲಿದೆ ಎಂದು ಕಾದಂಬರಿಗಳಲ್ಲಿ ಸೂಚಿಸಿದ್ದಾರೆ. ಆದರೆ ದೇಸಾಯಿಯವರ ಕಾದಂಬರಿಯಲ್ಲಿ ಬರುವ ಪಾತ್ರಗಳಲ್ಲಿ ಹೆಚ್ಚಿನವು ಇಂಗ್ಲೀಷ್ ಶಿಕ್ಷಣ ಕ್ರಮಕ್ಕೆ ತೆರೆದುಕೊಂಡವು. ಅಷ್ಟೇ ಅಲ್ಲ ಮೇಲು ಮಧ್ಯಮ ವರ್ಗದ ಅನುಭವವನ್ನು ಒಳಗೊಂಡಿರುವುವು. ಹಾಗಾಗಿ ತೀರಾ ಸಹಜವಾಗಿಯೇ ದೇಸಾಯಿಯವರ ಕಾದಂಬರಿಗಳಲ್ಲಿ ಅಂತರ ಜಾತಿಯ ವಿವಾಹಗಳು ಜರುಗುತ್ತವೆ. ಸಮಾಜ ಶಾಸ್ತ್ರಜ್ಞರ ಅಭಿಪ್ರಾಯವೊಂದನ್ನು ಸೂಚಿಸಬಹುದಾದರೆ, ಆಧುನಿಕತೆಯ ಪ್ರಭಾವ, ನಗರ ಜೀವನ ಕ್ರಮ, ಜನಸಂಖ್ಯೆಯ ಹೆಚ್ಚಳ, ಅಂತರಜಾತಿಯ ವಿವಾಹಕ್ಕೆ ಒಪ್ಪಿಗೆಯನ್ನು ನೀಡುತ್ತದೆ. ಹಾಗೆಯೇ ಆಧುನಿಕತೆಯ ಪ್ರವೇಶದಿಂದ ಜಾತಿ ಸಂಬಂಧಗಳು ಶಿಥಿಲಗೊಳ್ಳುತ್ತವೆ. ದೇಸಾಯಿಯವರ ಕಾದಂಬರಿಗಳು ಇವನ್ನು ಸೂಚಿಸುತ್ತವೆ.

ಈಚಿನ ಕೆಲವು ಕೃತಿಗಳಲ್ಲಿ ಮೇಲುಜಾತಿಯ ಚರಿತ್ರೆಗಳನ್ನು ಒಡೆಯುವುದಕ್ಕೆ ಅಂತರಜಾತಿಯ ವಿವಾಹಗಳು ಸಹಕರಿಸಬಲ್ಲದು ಎನ್ನುವ ಗ್ರಹಿಕೆಯಲ್ಲಿವೆ. ತೇಜಸ್ವಿಯವರ ಚಿದಂಬರ ರಹಸ್ಯದಲ್ಲಿ ರಫಿ ಮತ್ತು ಜಯಂತಿಯವರ ಸಂಬಂಧ ಈ ರೀತಿಯ ಪ್ರಶ್ನೆಗಳನ್ನು ಎತ್ತುತ್ತವೆ.

ಈಗ ಆಧುನಿಕ ಕನ್ನಡ ಸಾಹಿತ್ಯದ ಮುಖಾಂತರ ಹರಿದು ಬಂದ ಅಂತರಜಾತಿಯ ವಿವಾಹದ ಪರಿಕಲ್ಪನೆಗಳನ್ನು ಕುರಿತು ಚರ್ಚಿಸಬಹುದು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಂತರಜಾತಿಯ ವಿವಾಹವನ್ನು ಆದರ್ಶೀಕೃತ ಮೌಲ್ಯವಾಗಿ ಗ್ರಹಿಸಲಾಗಿದೆ. ಬಹುತೇಕ ಕೃತಿಗಳಲ್ಲಿ ಅಂತರಜಾತಿಯ ವಿವಾಹವೆಂಬುದನ್ನು ಒಂದು ತಾಂತ್ರಿಕ ನಿಲುವಾಗಿ ಗ್ರಹಿಸಲಾಗಿದೆ. ಅಂತರಜಾತಿಯ ವಿವಾಹವು ಆಧುನಿಕ ಕನ್ನಡದ ಪ್ರಾತಿನಿಧಿಕ ಪ್ರತಿಕ್ರಿಯೆಯ ಪ್ರಕಾರ ಸಾಂಪ್ರದಾಯಿಕ ಸಮಾಜವನ್ನು ಪ್ರಶ್ನಿಸಬಲ್ಲದು. ಅಂತರಜಾತಿಯ ವಿವಾಹವನ್ನು ನಾವು ಹೀಗೆ ವ್ಯಾಖ್ಯಾನಿಸಬಲ್ಲೆವು ಎಂಬುದರ ಮೇಲೆ ಮಾತ್ರ ಚರ್ಚೆ ಸಾಧ್ಯ. ಆಧುನಿಕ ಕನ್ನಡ ಸಾಹಿತ್ಯವು ಹುಟ್ಟಿರುವುದು ಆಧುನಿಕ ಪರಿವರ್ತನೆಗೊಳ್ಳುತ್ತಿರುವ ಸಮಾಜದಲ್ಲಿ ಸಾಂಪ್ರದಾಯಿಕ ಮಾದರಿಯನ್ನು ಮೀರಿದ ಸಾಮಾಜಿಕ ಸನ್ನಿವೇಶವಿದು. ಈ ಆಧುನಿಕ ಸಮಾಜದಲ್ಲಿ ಆಧುನಿಕತೆಗೂ, ಒಂದು ರೀತಿಯಿಂದ ನಿರ್ದಿಷ್ಟ ರೂಪದ ಸಂಘರ್ಷವಿದೆ. ಈ ಸಂಘರ್ಷದ ಅಂತಿಮ ನಿಲುವು ವ್ಯಕ್ತವಾಗುವುದು ಅಧಿಕಾರದ ವ್ಯಾಖ್ಯಾನದಲ್ಲಿ; ಆಸ್ತಿ, ಕುಟುಂಬ, ಜಾತಿ, ಪಾವಿತ್ರ್ಯ ಇತ್ಯಾದಿ ಅಂಗಗಳಿಗೆ ಅತ್ಯಂತ ನಿರ್ಣಾಯಕವಾದ ಸಂಬಂಧವಿದೆ. ಇವುಗಳ ನಡುವಣ ತಲ್ಲಣವನ್ನು ಆಧುನಿಕ ಕನ್ನಡದ ಕೆಲವೇ ಬರಹಗಾರರು ವಿವರಿಸುವ ಪ್ರಯತ್ನ ಮಾಡಿದ್ದಾರೆ. ಕಾರಂತರ ಲಂಕೇಶರ ಕಾದಂಬರಿಗಳಲ್ಲಿ ಇವುಗಳ ಸಂಕೀರ್ಣ ಸಂಬಂಧದ ವಿವರಗಳಿವೆ.

ಜಾತಿ ಪದ್ಧತಿಯನ್ನು ಕೊಳಕು ಎಂದು ವಿವರಿಸುವಾಗಲೂ ಈ ಕೆಲವು ಸೂಕ್ಷ್ಮಗಳನ್ನು ನಾವು ಇಟ್ಟುಕೊಳ್ಳಬೇಕಾಗುತ್ತದೆ. ವರ್ಣಾಶ್ರಮದ ವ್ಯಾಖ್ಯಾನವು ಇಡಿಯ ಸಮಾಜವನ್ನು ಕೇವಲ ನಾಲ್ಕು ವರ್ಣಗಳನ್ನು ಮಾತ್ರ ನೋಡುತ್ತದೆ. ಅದರ ಎದುರಲ್ಲಿ ಉಪಜಾತಿಗಳಿಗೆ ಬೆಲೆಯಿಲ್ಲ. ಈ ರೀತಿಯ

ತಾತ್ವಿಕ ಚೌಕಟ್ಟಿನಲ್ಲಿ ವರ್ಣ ಸಂಕಷ್ಟಕ್ಕೆ ಪಾಪವು ಕಟ್ಟಿಟ್ಟಿದೆ. ಈ ಮಾತನ್ನು ಹೇಳುವ ಸಂದರ್ಭದಲ್ಲಿ ವರ್ಣಸಂಕಟಕ್ಕೆ ಹಿಂದೂ ಪುನರುತ್ಥಾನವಾದಿ ಸಾಂಪ್ರದಾಯಿಕ ವ್ಯಾಖ್ಯಾನವು ತುಂಬಾ ಕ್ರೌರ್ಯಕೂಡಿದೆಯೆಂಬುದನ್ನು ನಮಗೆ ಮನಸ್ಮೃತಿ ಕಲಿಸಿಕೊಡುತ್ತದೆ. ಮನುಧನಾತ್ಮಕವಾಗಿ ಹೇಳುವ ಅಂಶವೇ ಈ ವಿಕಾಲ ಮನಸ್ಸಿನ ಪ್ರತಿನಿಧಿಯಾಗಿ ಕಾಣಿಸುತ್ತದೆ. ಚರಿತ್ರೆಯ ಆ ಗಡಿಯನ್ನು ನಾವು ದಾಟಿ ಬಂದಿದ್ದೇವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಈ ರೀತಿಯ ನೆಲೆಗಳ ಬಗೆಗೆ ಗೌರವವನ್ನು ವ್ಯಕ್ತಪಡಿಸಿದ ಬರಹಗಾರರು ಕಡಿಮೆ. ಭಾರತೀಯ ಜಾತಿ ಪದ್ಧತಿಯ ಬಗೆಗೆ ಮಾರ್ಕ್ಸ್‌ವಾದಿಗಳು ಎರಡು ರೀತಿಯ ನಿಲುವುಗಳನ್ನು ತಳೆದಿದ್ದಾರೆ. ಮೊದಲನೆಯದು, ಜಾತಿಯೆನ್ನುವುದು ಭಾರತೀಯ ಸಮಾಜ ಮೇಲು ರಚನೆಗೆ ಸಂಬಂಧಿಸಿದ ಪ್ರತಿಕ್ರಿಯೆ. ಮೊದಲು ಉತ್ಪಾದನಾ ಸಂಬಂಧಕ್ಕೆ ಸಂಬಂಧಿಸಿವ, ಆದರ್ಶೀಕೃತವಾದ ಸ್ವರೂಪವೇ ಜಾತಿ. ಜಾತಿಯು ಅನಂತರ ವರ್ಗ ಸಂಬಂಧವಾಗಿ ಪರಿವರ್ತಿತವಾಗಿದೆ. ಬೇರೊಂದು ರೀತಿಯೆಂದರೆ - ಭಾರತೀಯ ಅಂತರಂಗದಲ್ಲಿಯೇ ಬೇರೂರಿರುವ ಜಾತಿಯೂ ಬುಡರಚನಾಕ್ರಮವನ್ನು ಸೂಚಿಸುತ್ತದೆ. ಭಾರತೀಯ ಜಾತಿಪದ್ಧತಿಗೆ ಅದರದ್ದೇ ಅನ್ನಬಹುದಾದ ಚರಿತ್ರೆಯೊಂದಿಗೆ ಒಟ್ಟು ಆರ್ಥಿಕ ವ್ಯವಹಾರಗಳ ಸಂಬಂಧವನ್ನು ಬುಡ ರಚನೆಯಲ್ಲಿ ಜಾತಿ ಪದ್ಧತಿಯು ಇಟ್ಟುಕೊಂಡಿದೆ.

ಮೊದಲ ನಿಲುವಿನಲ್ಲಿ ಜಾತಿಯನ್ನು ಒಂದು ಚಾರಿತ್ರಿಕ ಅಭ್ಯಾಸದಂತೆ ಗ್ರಹಿಸಲಾಗಿದೆ. ಹೀಗಾಗಿ ಉತ್ಪಾದನಾ ಸಂಬಂಧಗಳ ಬದಲಾವಣೆಯು ಜಾತಿ ಸಂಬಂಧಗಳನ್ನು ಬದಲಾಯಿಸಬಹುದು. ನಿರ್ದಿಷ್ಟ ಚಾರಿತ್ರಿಕ ಘಟ್ಟದಲ್ಲಿ ಇದು ಬದಲಾಗುತ್ತದೆ. ಹಾಗೆಯೇ ನಿರ್ದಿಷ್ಟ ಉತ್ಪಾದನಾ ಸಂಬಂಧಗಳಿಗೆ ಅನುಸಾರವಾಗಿ ಜಾತಿಯ ನಂಬಿಕೆಗಳು ಮತ್ತು ಅವುಗಳ ಕ್ರಿಯಾತ್ಮಕ ಸ್ವರೂಪವು ಬದಲಾಗುತ್ತದೆ.

ಎರಡನೆಯ ನಿಲುವಿನಲ್ಲಿ ಜಾತಿಯನ್ನು ಅದರ ರೂಪ ಮತ್ತು ಆಶಯದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವ ಪ್ರಯತ್ನವಿದೆ. ವರ್ಗ ಆಧಾರಿತ ವಿಶ್ಲೇಷಣೆಯು ಮುಖ್ಯವಾಗಿದೆ. ಭಾರತೀಯ ಚರಿತ್ರೆಯ ಉತ್ಪಾದನಾ ಸಂಬಂಧಗಳನ್ನು ಇದು ಸೂಚಿಸುತ್ತದೆ. ಜಾತಿಗೆ ಭೌತಿಕ ರೂಪವಿದೆ. ಅದು ಭೌತಿಕ ಅವಶ್ಯಕತೆಗೆ ಅನುಗುಣವಾಗಿ ರೂಪುಗೊಂಡಿದೆ. ವಸಾಹತುಶಾಹಿ ಸನ್ನಿವೇಶದಲ್ಲಿ ಜಾತಿಗೆ ಕಾನೂನು ಬದ್ಧರೂಪವು ಬಂದಿತು. ಬಂಡವಾಳ ಶಾಹಿ ಜಗತ್ತಿಗೆ ಬಂದಿರುವ ಪ್ರತಿಕ್ರಿಯೆಯಿದು. ವಸಾಹತುಶಾಹಿ ಸನ್ನಿವೇಶದಲ್ಲಿ ಸೃಷ್ಟಿಯಾದ ಬಂಡವಾಳ ಶಾಹಿ ಜಗತ್ತು ಜಾತಿಸಂಬಂಧಗಳನ್ನು ಹೊಸ ರೀತಿಯಲ್ಲಿ ವ್ಯಾಖ್ಯಾನಿಸುವ ಪ್ರಯತ್ನವನ್ನು ಮಾಡಿತು. ವರ್ಗ ಪ್ರಸಕ್ತಿಗಳು ಜಾತಿಯನ್ನು ಬೇರೆ ರೀತಿಯಲ್ಲಿ ನೋಡಿತು. ಹೊಸ ನ್ಯಾಯಬದ್ಧ ಅಧಿಕಾರದ ಪ್ರಯತ್ನವು 'ಜಾತಿಗೆ' ಆಸ್ತಿ, ಉದ್ಯೋಗ, ಮೊದಲಾದವುಗಳಿಗೆ ಲಗತ್ತಾದ್ದರಿಂದ ಜಾತಿ ಪದ್ಧತಿಗೆ ಸಂವಿಧಾನದ ರೂಪದಲ್ಲಿ ಹೊಸ ಅವಕಾಶ ದೊರೆತಿರುವುದಂತೂ ಸತ್ಯ. ಈ ಕಾರಣದಿಂದಲೇ ಆಧುನಿಕ ಬಂಡವಾಳ ಶಾಹಿ ಜಗತ್ತಿನಲ್ಲಿ ವರ್ಗ ಮತ್ತು ಜಾತಿಗೆ ಪರಸ್ಪರ ಸಂಕೀರ್ಣ ಸಂಬಂಧವು ಸಾಧ್ಯವಾಗದೇ ಹೋಯಿತು. ಇದರಿಂದ ಆಧುನಿಕ ಸ್ಥಿತಿಯಲ್ಲಿ 'ಜಾತಿ'ಯು ತನ್ನ ಸಾಂದರ್ಭಿಕ ನೆಲೆಯಿಂದ ಕೆಲಸ ಶುರುಮಾಡಿತು. ಅಂತರಜಾತಿಯ ಸಂಬಂಧಗಳು ಆಧುನಿಕ ನಗರ ಜಗತ್ತಿನಲ್ಲಿ ವರ್ಗದ ಅನುಭವವಾಗಿ ಪರಿವರ್ತಿತವಾಗಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪದೇ ಪದೇ ಚರ್ಚಿತವಾಗಿರುವ ಅಂತರ ಜಾತಿಯ ವಿವಾಹದ ಪರಿಕಲ್ಪನೆಯು ಈ ಮೇಲೆ ಹೇಳಿದ ಕಾರಣದಿಂದ ವಸಾಹತುಶಾಹಿ ಅನುಭವಕ್ಕೆ ಅದು

ಸಂಬಂಧಿಸಿಕೊಂಡಿದೆ. ಅಂದರೆ ವಸಾಹತು ಪೂರ್ವದ ಸನ್ನಿವೇಶದಲ್ಲಿ ಅಂತರ ಜಾತಿಯ ವಿವಾಹವನ್ನು ವಿವರಿಸಿರುವ ಬಗೆಗೂ ವಸಾಹತುಶಾಹಿ ಅನುಭವದ ಪೂರ್ವದಲ್ಲಿ ಇದ್ದ 'ಅನುಲೋಮ' ವಿಲೋಮ ವಿವಾಹದ ಪರಿಕಲ್ಪನೆಗಳನ್ನು ಈಗ ನಾವು ಅನ್ವಯಿಸುವಂತಿಲ್ಲ. ಯಾಕೆಂದರೆ ಆ ಸಂದರ್ಭವನ್ನು ನಾವು ದಾಟಿಬಿಟ್ಟಿದ್ದೇವೆ. ಹಾಗೆಯೇ ಜಮೀನ್ದಾರಿ ಪದ್ಧತಿಯಲ್ಲಿ ಮೇಲು ಜಾತಿಯವರು ಕೆಳಜಾತಿಯ ಸ್ತ್ರೀಯನ್ನು 'ಇಟ್ಟು'ಕೊಳ್ಳಬಹುದು. ಇಟ್ಟುಕೊಳ್ಳುವುದು ಪರಿಭಾಷೆಯ ಜಮೀನ್ದಾರಿ ಪದ್ಧತಿಯ ಆಶಯಕ್ಕೆ ತಕ್ಕಂತೆ ಇದೆ. ಆಧುನಿಕ ಕನ್ನಡ ಸಾಹಿತ್ಯದಲ್ಲೇ ಈ ಪರಿಕಲ್ಪನೆಯು ಬದಲಾಗಿದೆ. ಹೀಗಾಗಿಯೇ 'ಅಂತರ ಜಾತಿಯ ವಿವಾಹ'ಕ್ಕೆ ವಿಶೇಷ ಮನ್ನಣೆಯು ಸಂದಿದೆ.

ಕನ್ನಡದ ನವೋದಯ ಸಾಹಿತ್ಯದ ಸಂದರ್ಭದಲ್ಲಿ ಅಂತರಜಾತಿಯ ವಿವಾಹವನ್ನು ವಿವರಿಸುವಾಗ 'ಆದರ್ಶವಾದಿ' ಸಾಮಾಜಿಕ ಪ್ರತಿಕ್ರಿಯೆಯ ರೀತಿಯಲ್ಲಿ ಹೇಳಲಾಗಿದೆ. ಆದರೆ ಆಯ್ಕೆಯ ಸಂದರ್ಭದಲ್ಲಿ ಗೊರೂರು ಅವರು ಅದನ್ನು ಗಾಂಧಿವಾದಿ ಹಿನ್ನೆಲೆಯಲ್ಲಿ ತಾತ್ತ್ವಿಕ ಚೌಕಟ್ಟನ್ನು ರೂಪಿಸಿದ್ದಾರೆ. ಸಾಮಾಜಿಕ ಸಂರಚನೆಯ ಮೇಲೆ ಬೀರುವ ಪರಿಣಾಮವು ಅವರಿಗೆ ಮುಖ್ಯವಾಗಿದೆ.

ನವ್ಯ ಸಾಹಿತ್ಯ ಸಂದರ್ಭದಲ್ಲಿ ಅಂತರಜಾತಿಯ ವಿವಾಹಕ್ಕೆ ಇರುವ ಸಾಮಾಜಿಕ ಆಯಾಮವು ಮುಖ್ಯವಾಗಿಲ್ಲ. ದಲಿತ ಮತ್ತು ಬಂಡಾಯ ಕೃತಿಗಳಲ್ಲಿ ಮತ್ತೆ ಸಾಮಾಜಿಕ ಸಾಂಪ್ರದಾಯಿಕ ಸಂರಚನೆಯನ್ನು ಭೇದಿಸಲು ಅಂತರಜಾತಿಯ ವಿವಾಹದ ಚಿತ್ರಣಗಳಿವೆ. ಆದರೆ ಒಟ್ಟು ಸಾಮಾಜಿಕ ಸಂರಚನೆಯನ್ನು ಭೇದಿಸಲಾರದಷ್ಟೆ?

**ಗ್ರಂಥ ಋಣ:**


೧. ಶಿವರಾಮಕಾರಂತ ೧೯೭೧ ನಂಬಿದವರ ನಾಕ-ನರಕ ಹರ್ಷ ಪ್ರಕಟನಾಲಯ, ಪುತ್ತೂರು,

೨. " ೧೯೬೮ ಇನ್ನೊಂದೇ ದಾರಿ, ಹರ್ಷ ಪ್ರಕಟಣಾಲಯ, ಪುತ್ತೂರು, ದ.ಕ.

೩. " ೧೯೭೯ ಚೋಮನ ದುಡಿ, ರಾಜಲಕ್ಷ್ಮಿ, ಬೆಂಗಳೂರು.

೪. " ೧೯೭೦ ಬತ್ತದ ತೊರೆ, ಹರ್ಷ ಪ್ರಕಟಣಾಲಯ, ಪುತ್ತೂರು, ದ.ಕ.

೫. ಗೊರೂರು ರಾಮಸ್ವಾಮಿ ಅಯ್ಯಂಗಾರ್ ೧೯೮೨ ಹೇಮಾವತಿ, ಐ.ಬಿ.ಎಸ್. ಪ್ರಕಾಶನ, ಬೆಂಗಳೂರು - ೯.

೬. ಎಸ್.ಎಲ್. ಭೈರಪ್ಪ ೧೯೭೮ ದಾಟು, ಸಾಹಿತ್ಯ ಭಂಡಾರ, ಹುಬ್ಬಳ್ಳಿ.

೭. ಪಿ. ಲಂಕೇಶ್ ೧೯೭೮ ಮುಸ್ಸಂಜೆಯ ಕಥಾ ಪ್ರಸಂಗ, ನೆಲಮನೆ ಪ್ರಕಾಶನ, ಮೈಸೂರು.

೮. ಶ್ರೀಕೃಷ್ಣ ಆಲನಹಳ್ಳಿ ೧೯೮೩ ಭುಜಂಗಯ್ಯನ ದಶಾವತಾರಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.


*(ಕ.ಸಾ. ಅಕಾಡೆಮಿ ಮತ್ತು ಕನ್ನಡ ವಿಭಾಗ ಮಂಗಳೂರು. ಇದರ ಆಶ್ರಯದಲ್ಲಿ ನಡೆದ ವಿಚಾರ ಸಂಕಿರಣಕ್ಕಾಗಿ ಬರೆದ ಪ್ರಬಂಧ. ೧೦.೧೨.೧೯೯೩)*

# ಜನ್ನನ ಅಮೃತ ಮತಿ - ಅಷ್ಟಾವಂಕರ ಪ್ರಸಂಗ : ವೈದ್ಯ ವಿಜ್ಞಾನದ ನೆಲೆಯಿಂದ

- ಪ್ರೊ. ಶಿವರಾಮಯ್ಯ

ಜನ್ನನ ಯಶೋಧರ ಚರಿತೆಯು ಕಾಲಕಾಲಕ್ಕೆ ಪುನರ್ ಮೌಲೀಕರಣಕ್ಕೆ ಒಳಪಡುತ್ತಲೇ ಬಂದಿದೆ. ಚರ್ಚೆಗೆ ಈಡಾಗಿರುವ ಮುಖ್ಯ ಭಾಗವೆಂದರೆ ಅಮೃತಮತಿ ಮತ್ತು ಅಷ್ಟಾವಂಕರ ಪ್ರಸಂಗ. ಮೊದಮೊದಲು ತೀ.ನಂ.ಶ್ರೀ ಮುಂತಾದವರು ಯಶೋಧರ ಚರಿತೆಯ ಯಶಸ್ಸು ನಿಂತಿರುವುದು ಅಮೃತಮತಿಯ ಪ್ರಣಯ ಪ್ರಸಂಗದ ಮೇಲೆ ಎಂಬುದಾಗಿ ಅಭಿಪ್ರಾಯಪಟ್ಟರು; ಒಬ್ಬಿಬ್ಬರು ಅಮೃತಮತಿಯ ಪಾತ್ರವನ್ನು ಮನೋವಿಜ್ಞಾನದ ನೆಲೆಯಿಂದ ವಿಶ್ಲೇಷಿಸಿ ನೋಡಿದರು. ಅನಂತರ ಕುವೆಂಪು ಮಾತ್ರ ಜನ್ನನಕಾವ್ಯೋದ್ದೇಶ ಅಮೃತಮತಿಯ ಪ್ರಣಯ ನಿರೂಪಣೆ ಅಲ್ಲ, ಅದು ಅವಳ ಕಾಮ ವಿಕಾರ ನಿರೂಪಣೆ ಎಂದರು. ಈಚಿಗೆ ಒಬ್ಬ ಮಡಿವಂತ ಭಟ್ಟರು ತೀರ ಅಸಹನೆಯಿಂದ ಅವಳನ್ನು 'ಕಾಮುಕ ಹೆಣ್ಣು', 'ಜಾರಸ್ತ್ರೀ' ಮುಂತಾಗಿ ಜರಿದರು.[1] ಆದರೆ ಈ ಎಲ್ಲ ಬಗೆಯ ವಿಮರ್ಶೆಯನ್ನು ಪರಿಶೀಲಿಸಿ ನೋಡಿದ ಗಿರಡ್ಡಿ ಗೋವಿಂದರಾಜ ಅವರು ಈ ಕೃತಿ ಬದುಕಿನ ಗಹನ ಪ್ರಶ್ನೆಗಳಿಗೆ ಸಮಾಧಾನಕರ ಉತ್ತರವನ್ನೇನೂ ಕೊಡುವುದಿಲ್ಲ ಎಂಬ ಉಚಿತ ತೀರ್ಮಾನಕ್ಕೆ ಬಂದರು. ಗಿರಡ್ಡಿಯವರೆಂದಂತೆ ಜನ್ನನ ಕಾವ್ಯೋದ್ದೇಶವನ್ನು ಗಮನಿಸಿ, ಕುವೆಂಪು ಅವರ ಮಾತನ್ನು ಸಮರ್ಥಿಸಿ, ಉಳಿದ ವಿಮರ್ಶಕರ ಮಾತನ್ನು ಅತ್ತಸರಿಸಿ, ವೈದ್ಯ ವಿಜ್ಞಾನದ ನೆಲೆಯಿಂದ ಅಮೃತಮತಿ ಮತ್ತು ಅಷ್ಟಾವಂಕರ ಪ್ರಸಂಗವನ್ನು ನೋಡಿದರೆ ಹೇಗೆ? ಎಂಬ ಪ್ರಯತ್ನವನ್ನು ನಾನಿಲ್ಲಿ ಕೈಗೊಂಡಿದ್ದೇನೆ.

ಇದುವರೆಗಿನ ವಿಮರ್ಶೆ ಯಶೋಧರ ಮತ್ತು ಅಮೃತಮತಿಯರ ದುರಂತ ಪ್ರಣಯಕ್ಕೆ ವಿಧಿಯ ಕೈವಾಡವೇ ಕಾರಣವೆಂದೂ, ಅಮೃತಮತಿ ಜಾರುವುದಕ್ಕೆ ಅವಳ ಸಂಗೀತ ಪ್ರಿಯತೆಯೇ ಕಾರಣವೆಂದೂ, ಮನೋವಿಜ್ಞಾನದ ನೆಲೆಯಿಂದ ನೋಡಿದರೆ ಅವಳ ವಿಪರೀತ ಮನೋವಿಕಾರವೇ ಕಾರಣವೆಂದೂ ವಿಶ್ಲೇಷಿಸಿದೆ. ಅದೇನೆ ಇರಲಿ, ಯಶೋಧರ ಚರಿತೆ ವಾಸ್ತವ ಮಟ್ಟಕ್ಕಿಂತ ಭಿನ್ನವಾದ ಮಟ್ಟದಲ್ಲೇ ಕೆಲಸ ಮಾಡುತ್ತದೆ. ಆದ ಕಾರಣ ಬೆಂತರನ ಪ್ರಸಂಗವನ್ನಾಗಲಿ, ಭವಾವಳಿಯ ಕಥೆಯನ್ನಾಗಲಿ, ಮಾರಿದತ್ತನ ಮನಃಪರಿವರ್ತನೆಯನ್ನಾಗಲಿ ವಾಸ್ತವ ಮಟ್ಟದಲ್ಲಿ ನಾವು ಒಪ್ಪಿಕೊಳ್ಳಲಾರೆವು. ಗಿರಡ್ಡಿ ಗೋವಿಂದರಾಜರು ಎಂದಂತೆ, ಇದನ್ನೆಲ್ಲ ಪ್ರಶ್ನಿಸದ ನಮ್ಮ ವಿಮರ್ಶೆ ಅಮೃತಮತಿಯ ಪ್ರಣಯ (ಪ್ರಣಯ ಎಂದು ಕರೆಯುವುದೇ ಅನುಚಿತ) ಪ್ರಸಂಗದಲ್ಲಿ ಮಾತ್ರ ವಾಸ್ತವ ಚಿತ್ರಣವನ್ನು ಕಾಣಲು ಏಕೆ ಹಾತೊರೆಯುವುದೊ ತಿಳಿಯದು. ಎಂದರೆ ಕಾವ್ಯ

ಶಿಲ್ಪದಲ್ಲಿ ಬೆಂತರನ ಕೂಗಿಗೂ ಭವಾವಳಿಯ ಚಿತ್ರಣಕ್ಕೂ, ಮಾರಿ ದೇವತೆಯ ಮನಃ ಪರಿವರ್ತನೆಗೂ ನಿರ್ದಿಷ್ಟವಾದ ಅನಿವಾರ್ಯವಾದ ಉದ್ದೇಶವಿರುವುದಾದರೆ, ಅಮೃತಮತಿ ಅಷ್ಟಾವಂಕರ ಪ್ರಸಂಗಕ್ಕೂ ನಿರ್ದಿಷ್ಟವಾದ ಅನಿವಾರ್ಯವಾದ ಉದ್ದೇಶವಿದೆ. ಈ ದೃಷ್ಟಿಯಿಂದ ಜನ್ನನ ಕಾವ್ಯ ಸಂವಿಧಾನವನ್ನು ಗಮನಿಸಿದರೆ ಕವಿಗೂ ವಾಸ್ತವ ಚಿತ್ರವನ್ನು ಕೊಡುವ ಉದ್ದೇಶ ಲವಲೇಶವೂ ಇಲ್ಲ. ಆದುದರಿಂದ ಅಮೃತಮತಿ ಮತ್ತು ಅಷ್ಟಾವಂಕರ ಪ್ರಸಂಗವನ್ನು ಮಾತ್ರ ವಾಸ್ತವ ಪ್ರಣಯ ಪ್ರಸಂಗವೆಂದು ಭ್ರಮಿಸಿ ಮಾತನಾಡುವುದು ಅನುಚಿತವೆನಿಸುತ್ತದೆ. ಆದ್ದರಿಂದ ಜನ್ನನ ಕಾವ್ಯೋದ್ದೇಶಕ್ಕೆ ಈ ಪ್ರಸಂಗವೂ ಕೂಡ ಎಷ್ಟರ ಮಟ್ಟಿಗೆ ದುಡಿಯುತ್ತದೆ ಎಂಬುದನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ. ಅದಕ್ಕಾಗಿ ನಾವೀಗ ಕವಿಯ ಆಶಯವನ್ನು ಮೊದಲು ಗ್ರಹಿಸುವುದು ಒಳ್ಳೆಯದು. ಈ ನಿಟ್ಟಿನಲ್ಲಿ ತಮ್ಮ ಚರ್ಚೆಯನ್ನು ಬೆಳಸಿರುವ ಗಿರಡ್ಡಿಯವರು "ಕಾವ್ಯದಲ್ಲಿ ಬರುವ ಶಬ್ದವಿನ್ಯಾಸ, ವಸ್ತು ಸೂಚಕ ಪ್ರತಿಮೆಗಳು, ಸಂಕೇತಗಳು ಹಾಗೂ ಸಾಂಕೇತಿಕ ಕ್ರಿಯೆಗಳು ಎಲ್ಲವೂ ಯಶೋಧರನ ಆತ್ಮ ಬೇಟೆಯ ಬಲಿಯಾಗಿ ಜನ್ಮಾಂತರಗಳಲ್ಲಿ ಬಳಲಿದ ಕಥೆಯೇ ಆಗಿದೆ" ಎನ್ನುತ್ತಾರೆ.[2] ಇದು ನಿಜ. ಆದರೆ ಯಶೋಧರನ ಈ ಆತ್ಮ ಬೇಟೆಗೆ ಬಳಸಿದ್ದು ಅಮೃತಮತಿ ಎಂಬ ದೀವ ಮೃಗ.

*ಅಮೃತಮತಿಗಡ ಯಶೋಧರ*
*ನಮನಃ ಪ್ರಿಯೆ ಆಕೆ ದೀವಮಾಗಿ ಪುಳಿಂದಂ*
*ಸುಮನೋಬಾಣಂ ತದ್ ಭೂ*
*ರಮಣನೊಲಿದಂತೆ ಗೋರಿಗೊಳಿಸುತ್ತಿರ್ಕುಂ*

ಆದ್ದರಿಂದ ಕವಿಯು ಸಾಕಿದ ಈ ದೀವಮೃಗ ಅವನ ನಿರ್ದೇಶನದಂತೆ ವರ್ತಿಸುತ್ತ ಯಶೋಧರನನ್ನು 'ಇಳಿಕೆಯ್ದು' ಅಷ್ಟಾವಂಕನತ್ತ ಸುಳಿದು ಹೋಗುತ್ತದೆ. ಆದರೆ ಈ ಮೃಗಕ್ಕೆ ಇಚ್ಛಾ ಸ್ವಾತಂತ್ರ್ಯವನ್ನು ನೀಡಿದ್ದರೆ ಹೀಗೆ ಕುವರ ವಿದ್ಯಾಧರನನ್ನು ಬಿಟ್ಟುಕೊಟ್ಟು ಆ ಗಜವೆಡಂಗನನ್ನು ವರಿಸುತ್ತಿತ್ತೆ? ಎಂದರೆ ಖಂಡಿತ ಇಲ್ಲ ಎಂಬುದೇ ಉತ್ತರ. ಆದರೆ ಕವಿ ಅವಳನ್ನು ರಾಜನ ಪಕ್ಕದಿಂದ ಬೇರ್ಪಡಿಸಿ ಬದಗನ ಕಾಲಬದಿಗೆ ತಳ್ಳಿ ಬಿಡುತ್ತಾನೆ; ಅದಕ್ಕೆ ಅವಳ ಸಂಗೀತಾಭಿರುಚಿಯನ್ನು ಬಲೆಯಾಗಿ ಬೀಸಿದ್ದಾನೆ. ಇದೂ ಕೂಡ ತೆಳುವಾದ ಬಲೆ, ನೆಪಕ್ಕೆ ಮಾತ್ರ ಪ್ರಯೋಗವಾಗಿದೆ. ಒಟ್ಟಿನಲ್ಲಿ ಆ ಹುಳುಕನೊಂದಿಗೆ ಕಾಮಲೀಲೆಯಲ್ಲಿ ತೊಡಗಿದ್ದ ರಾಣಿಯನ್ನು ನೋಡಿದ ರಾಜನಿಗೆ ಸಂಸಾರದಲ್ಲಿ ವಿರಕ್ತಿ ಹುಟ್ಟಬೇಕಾಗಿತ್ತು; ಲೆಕ್ಕಾಚಾರ ಹಾಕಿದಂತೆ ಆ ಘಟನೆ ನೆರವೇರಿತು.

ಆದರೆ ಇದು ಸಂಭಾವ್ಯವೆ ಎಂಬುದೇ ನಮ್ಮ ಪ್ರಶ್ನೆ. ಅಷ್ಟಾವಂಕನೆಂಬ ಹೆಸರಿಗೆ ಅನ್ವರ್ಥನಾಮನಾಗಿದ್ದ ಅವನ ವರ್ಣನೆ ಈ ಪ್ರಕಾರ ಇದೆ:

*ಪಡಿದಲೆ ಕುಟಿನೊಸಲಟಿಗ*
*ಣ್ಣೊರೆವಾಯ್ ಹಪ್ಪಳಿಕೆ ಮೂಗು ಮುರುಟಿದ ಕಿವಿ ಬಿ*
*ಬ್ಬಿ ಜಿವಿಲ್ ಕುಸಿಗೊರಲಿ ಟಿದಿರ್ದ*
*ಪೊರಂಟ ಬೆನ್ ಬಾತಬಸಿಱಿಡಂಗಿದ ಜಘನಂ*

*ಕಱೆದೊವಲ ಪಱೆಯ ಕುಱಿಯಿಂ*
*ತೞೆದಂದದ ಮೆಯ್ಯನಾತಮಾತನಕಯ್ಗಳ್*
*ಕುಱುಗಣ್ಣು ಕೂನಬೆನ್ ಕಾಲ್*
*ಮಱೆಯಿಸುವುದು ಟೊಂಕಮುರಿದ ಕತ್ತೆಯ ಕಾಲಂ*

*ಮುದುಗರಡಿಯ ಮುದುದೊವಲಂ*
*ದದ ಕರಿಯಂ ತಾಳಕಾಯ ಮೋಳಿಗೆಯೊಂದಂ*
*ದದ ಮುರುಡ ನಷ್ಟವಂಕಂ*
*ಮೊದಲೊಣಗಿದ ಕೂನ ಕೊರಡಿನಂದದ ಕೊಂಕಂ*

ಇಲ್ಲಿ ಕುಷ್ಠ (ತೊನ್ನು) ಎಂಬ ಶಬ್ದದ ಬಳಕೆ ಇಲ್ಲವಾದರೂ ಅಷ್ಟಾವಂಕನ ಸ್ಥಿತಿಯು ಆಧುನಿಕ ವೈದ್ಯ ವಿಜ್ಞಾನದ ರೀತ್ಯ ನೋಡಿದರೆ ಇದು ಕುಷ್ಠರೋಗದ ಸಕಲ ಲಕ್ಷಣವನ್ನೇ ಹೋಲುತ್ತದೆ.[3]

ಮತ್ತು ಇದೇ ಸಂದರ್ಭದಲ್ಲಿ ಮತ್ತೊಂದು ಸಂಗತಿಯನ್ನು ಹೇಳಬಹುದಾಗಿದೆ. ಕುಷ್ಠ ನಿವಾರಣೆಗಾಗಿ ಆಜನ್ಮ ಪರ್ಯಂತ ಸೇವೆಗೈದ ಬಾಬಾ ಆಮ್ಟೆಯವರ ಆತ್ಮ ಕಥನದಲ್ಲಿ ಉಕ್ತವಾಗಿರುವ ಅವರ ಒಂದು ಅನುಭವ ಹೀಗಿದೆ: ಆಮ್ಟೆಯವರು ಮೊಟ್ಟ ಮೊದಲು ಇಂಥ ಕುರೂಪಿ ಕುಷ್ಠರೋಗಿಯನ್ನು ತಮ್ಮ ಊರಿನ ಸರ್ಕಲ್‌ನಲ್ಲಿ ಕಂಡು, ಹೆಬ್ಬುಲಿಗೂ ಹೆದರದ ವೀರ ಪುರುಷ ಕುಷ್ಠರೋಗಿಯ ಆ ಊಹಾತೀತ ಸ್ಥಿತಿಗೆ ಹೆದರಿ ಓಡಿ ಬಿಡುತ್ತಾರಂತೆ.[4] ಎಂದ ಮೇಲೆ ಅಷ್ಟಾವಂಕನ ವರ್ಣನೆಯು ಎಷ್ಟೇ ಉತ್ಪ್ರೇಕ್ಷೆ ಎಂದು ಭಾವಿಸಿದರೂ ಅಮೃತಮತಿಯಂಥ ಶಿಷ್ಟಾಚಾರ ಸಂಸ್ಕಾರವುಳ್ಳ ರಾಣಿ; ಸಂಗೀತಾದಿ ಕಲೆಗಳಲ್ಲಿ ಆಸಕ್ತಿಯಿರುವ ಯಶೋಧರನ ಮನಃ ಪ್ರಿಯೆ; ಯುವರಾಜನಾಗಿರುವ ಯಶೋಮತಿಯ ತಾಯಿ ಈ ನಡು ವಯಸ್ಸಿನಲ್ಲಿ 'ಪೊಲ್ಲಮೆಯೆ ಲೇಸುನಲ್ಲರ ಮೊಯ್ಯೊಳ್' ಎಂದು ಆ ಗಜವೆಂಡಂಗನ ಬಳಿಗೆ ಕಾಮಾತುರಳಾಗಿ ಧಾವಿಸಿ ಹೋದಳೆಂದರೆ ಯಾರಾದರೂ ನಂಬತಕ್ಕ ಮಾತೆ? ಇದೆಲ್ಲ ವಾಸ್ತವವೆಂದು ನಮ್ಮ ವಿಮರ್ಶನ ಲೋಕಕ್ಕೆ ಕಂಡದ್ದೇ ಸೋಜಿಗ! ಆದರೆ ಸೂಕ್ಷ್ಮವಾಗಿ ನೋಡಿದರೆ ಜನ್ನ ಮೆರೆದಿರುವ ಚಮತ್ಕಾರವನ್ನು ಇಲ್ಲಿ ಗುರ್ತಿಸಬಹುದಾಗಿದೆ. ಅದೇನೆಂದರೆ ದೂದವಿಯ ಮುಖದಿಂದ ಬದಗನ ರೂಪವರ್ಣನೆಯನ್ನು ಕೇಳುವವರೆಗೆ ಮಾತ್ರ ಅಮೃತಮತಿಯನ್ನು ಅವಳ ಇಚ್ಛಾಶಕ್ತಿಯಂತೆ ವರ್ತಿಸಲು ಬಿಡಲಾಗಿದೆ. ಈ ಪದ್ಯ ನೋಡಿ:

*ಎಂದೊಡೆ ದೊದವಿಗವಳಿಂ*
*ತೆಂದಳ್‌ಗರಗರಿಕೆ ಕೊರಲೊಳೀಕ್ಷಣದೊಳ್‌ವಾರ್*
*ಬಿಂದು ಮಿಡುಕೆರ್ದೆಯೊಳೊದವೆ ಪು*
*ಳಿಂದ ಕಣೆಗಟ್ಟಿನಿಂದ ವನಹರಿಣಿಯವೊಲ್*

ಕೊರಳಲ್ಲಿ: ಗದ್ಗದ, ಕಣ್ಣಲ್ಲಿ ನೀರು, ಎದೆಯಲ್ಲಿ ಮಿಡುಕು. ಇಷ್ಟೆಲ್ಲ ಸಂಕಟ ಅಮೃತಮತಿಯಲ್ಲಿ ಯಾಕೆ ಉಕ್ಕಿತು? ನೂತ್ನಗೀತಗಾರ ಕುರೂಪಿಯಾಗಿದ್ದಾನಲ್ಲ ಎಂದೆ? ರಾಜನನ್ನು ತೊರೆಯಬೇಕಲ್ಲ ಎಂದೆ? ರಾಣಿಯಾದ ಮರ್ಯಾದೆಗಾಗಿಯೇ? ಯಾಕಾಗಿ ಈ ಸಂಕಟ?

ಇಚ್ಛೆ ಕೇಳುವರಿಲ್ಲ, ಗುಟ್ಟು ಬಿಚ್ಚುವರಿಲ್ಲ. ಅಂತೂ ಕಣೆಗಟ್ಟಿನಿಂದ ವನಹರಿಣಿಯಂತೆ ಇದ್ದ ಅಮೃತಮತಿ ಕ್ಷಣಾರ್ಧದಲ್ಲಿ ಸಾವರಿಸಿಕೊಂಡು ಒಲವಾದೊಡೆ ರೂಪಿನ ಕೋಟಲೆಯೇವುದೋ ಎಂದು ವಿನೂತನ ಪ್ರಣಯ ಸಿದ್ಧಾಂತವನ್ನು ಮಂಡಿಸುತ್ತಾಳೆ. ಅವಳ ಇಚ್ಛಾಶಕ್ತಿಯನ್ನು ಇಲ್ಲಿಗೆ ನಿರೋಧಿಸಿ ಅಷ್ಟಾವಂಕನಲ್ಲಿಗೆ ಅಟ್ಟಿದ ಕವಿ. ಇನ್ನೂ ಮುಂದೆ ಅವಳು ಜನ್ನನ ಆಜ್ಞಾನುವರ್ತಿನಿ. ಈ ಮೇಲಿನ ಪದ್ಯವನ್ನು ಸೂಕ್ಷ್ಮವಾಗಿ ಹೀಗೆ ಪರಿಶೀಲಿಸಿದರೆ ಕವಿಯ ಚಮತ್ಕಾರ ಏನೆಂಬುದು ವಾಚಕರಿಗೆ ತಿಳಿಯುತ್ತದೆ.

ವಾಸ್ತವವಾಗಿ ಅಮೃತಮತಿ ಬದಗನಂಥ ಕುರೂಪಿಯೂ, ರೋಗಿಯೂ ಆದ ವ್ಯಕ್ತಿಯನ್ನು ಕಂಡು ಕೂಡುವುದಿರಲಿ, ಹೆದರಿ ಅಲ್ಲಿಂದ ಓಟ ಕೀಳುತ್ತಿದ್ದಳು. ಮೈಯ ಬೆವರು, ಬಾಯವಾಸನೆ, ಹಲ್ಲು ಕೀಸರಿಗೆ ಪ್ರಣಯಿಗಳು ಪರಸ್ಪರ ದೂರ ಸರಿಯುವಾಗ "ಇಂತಪ್ಪ ಕಾಮದೇವ"ನಿಗೆ ಅವಳು ಒಲಿಯುತ್ತಿದ್ದಳೆ? ಮೈ ಮನಸ್ಸುಗಳು ಒಗ್ಗುತ್ತಿದ್ದುವೆ? ಅ ಸಮರೂಪ ಗುಣ ಸ್ವಭಾವಗಳಿರುವ ಪಶು ಪಕ್ಷಿ ಪ್ರಾಣಿಗಳೇ ಕೂಟಕ್ಕೆ ಎಳಸುವುದಿಲ್ಲ ಎಂಬುದು ನಿಸರ್ಗದತ್ತ ಸಂಗತಿಯಾಗಿರುವಾಗ ಮನುಷ್ಯ ಲೋಕದಲ್ಲಿ ಇಂಥ ಕಾಮಕೇಳಿ ಘಟಿಸಿತು ಎಂದರೆ ನಂಬಬೇಕೆ? ಕವಿಯ ಕಲ್ಪನೆಗೆ ಒಂದು ಮಿತಿ ಬೇಡವೆ?

ಮತ್ತೊಂದು ವಿಚಾರ, ದೈಹಿಕವಾಗಿ ಸಂಭೋಗಕ್ಕೆ ನಾಲಾಯಕ್ಕಾದ ಆ ಷಂಡಬದಗನು ಹಗಲಿರುಳು ಮಹಾರಾಣಿಯೊಂದಿಗೆ ಸುರತಕ್ರೀಡೆಯಲ್ಲಿ ತೊಡಗಿದ್ದಾನೆಂದು ಹೇಳುವುದು ತೀರ ಅಸಂಭವ. ಹೋಗಲಿ, ಅವನು ಸಂಗೀತಜ್ಞನಾಗಿದ್ದು ಸುಸಂಸ್ಕೃತನೆ ಎಂದರೆ ಅದೂ ಇಲ್ಲ. ಆ ಹಿಂಸಾರಭಸಮತಿಯು ಒಮ್ಮೆ ತಡವಾಗಿ ಬಂದ ಮಹಾರಾಣಿಯನ್ನು ಬಾರೇಳುವಂತೆ ಬೀಟೆಯ ಕಾಲಿನಿಂದ ಒದೆಯುತ್ತಾನಲ್ಲದೆ, ಅವಳ ಕಣ್ ಸವಿರೂಪಿಗಾಗಲಿ, ಕಿವಿ ಸವಿದನಿಗಾಗಲಿ ಮಾರು ಹೋದವನಲ್ಲ. ಅಷ್ಟಾವಂಕನೂ ಇಲ್ಲಿ ಕವಿಯ ವಶವರ್ತಿಯೇ. ಇಲ್ಲವಾಗಿದ್ದರೆ ವಾಸ್ತವವಾಗಿ ಅಮೃತಮತಿಯು ತಾನಾಗಿ ಬಂದು ಎದುರು ನಿಂತಿದ್ದರೆ, ಅವಳ ರೂಪರಾಶಿ ಗೆ ಬೆಚ್ಚಿ ಭಯ ಲಜ್ಜಾ ದೈನ್ಯಭಾವಗಳಿಂದ ಮುದುಡಿ ಹೋಗುತ್ತಿದ್ದನೇನೊ! ಏಕೆಂದರೆ ಪಾಪಾತ್ಮರಿಗೆ ಮಾತ್ರ ಕುಷ್ಠ, ತೊನ್ನು ಮುಂತಾದ ರೋಗಗಳು ಬರುತ್ತವೆ ಎಂಬ ನಂಬಿಕೆ ಇದೆ. ಹೀಗೆ ಪಾಪ ಪ್ರಜ್ಞೆಯಿಂದ ತೊಳಲುತ್ತಿರುವ ಇಂಥ ಅಸಹಾಯಕ ರೋಗಿಗಳು ಜನ ವಿಹೀನವಾದ ಕಾಡುಮೇಡು, ಕೋಟೆ ಕೊತ್ತಲು, ಹಾಳು ಗುಡಿಗಳು ಮುಂತಾದ ಕಡೆ ಅವಿತುಕೊಂಡು ಜೀವಿಸುತ್ತಿದ್ದು, ದಯಾವಂತರು ನೀಡಿದ ಅನ್ನ ನೀರುಗಳಿಂದ ಜೀವಿಸುತ್ತಿದ್ದರು ಎಂಬುದಾಗಿ ಪ್ರಾಚೀನ ಪುರಾಣೇತಿಹಾಸಗಳು ಹೇಳುತ್ತವೆ.[5]

ಇದೆಲ್ಲದರ ತಾತ್ಪರ್ಯವೆಂದರೆ, ಅಮೃತಮತಿ ಅಷ್ಟಾವಂಕರ ಸಹಜ ಸಂಸ್ಕಾರ ಜನ್ಯ ಗುಣ ಸ್ವಭಾವಗಳನ್ನು ಮೊದಲೆ ಹತ್ತಿಕ್ಕಿದ ಕವಿ ತನ್ನ ಕಾವ್ಯೋದ್ದೇಶಕ್ಕೆ ತಕ್ಕಂತೆ, ಸಾಕಿದ ಪ್ರಾಣಿಗಳಿಂದ ಬೇಟೆಯಾಡುವಂತೆ, ಅವರನ್ನು ದುಡಿಸಿಕೊಳ್ಳುತ್ತಾನೆಂಬುದನ್ನು ಹೇಳುವುದಕ್ಕಾಯಿತು. ಇನ್ನೂ ನಿಜ ಹೇಳಬೇಕೆಂದರೆ, ಇಂತಪ್ಪ ಬದಗನನ್ನೂ ಕಾಮಿಸಿ ಕೂಡುವಷ್ಟು ಯಾವ ಹೆಣ್ಣು ಚಪಲಚಿತ್ತಳಿರುವುದಿಲ್ಲ. ಇಷ್ಟಕ್ಕೂ ಅವಳಿಗೆ ಅಂಥ ತೀವ್ರ ಕಾಮನೆಗಳಿದ್ದು ತನ್ನ ಗಂಡನೊಂದಿಗೆ ಅದು ಪೂರೈಸದಿದ್ದರೆ, ಅಷ್ಟಾವಂಕನಿಗಿಂತ ಸಹ್ಯವಾದ ವ್ಯಕ್ತಿಯನ್ನಾದರೂ ಕೂಡಬಹುದಿತ್ತಲ್ಲ.

ಅರಮನೆಗಳಲ್ಲಿ ಇಂಥ ರಹದಾರಿಗಳನ್ನು, ಒಳದಾರಿಗಳನ್ನು ಯಾರಾದರೂ ತೋರಿಸಿ ಕೊಡುತ್ತಿದ್ದರಷ್ಟೆ. ಅಮೃತಮತಿಯ ಪರವಾಗಿ ಇನ್ನೂ ಒಂದು ಮಾತನ್ನು ಹೇಳುವುದಾದರೆ ಅವಳು ಅಷ್ಟೊಂದು ಸಂಗೀತ ಪ್ರಿಯೆಯಾಗಿದ್ದ ಪಕ್ಷದಲ್ಲಿ ಆ ಬದಗನನ್ನು ಕರೆಸಿ ಅರಮನೆಯ ವತಿಯಿಂದ ವೈದ್ಯಕೀಯ ನೆರವನ್ನಾದರೂ ಕೊಡಿಸಬಹುದಿತ್ತು. ಅವನೊಂದಿಗೆ ಕೂಡಲೇ ಬೇಕಿತ್ತೆ? ಜೀವದಯೆ ಜೈನಧರ್ಮವಲ್ಲವೇ? ಗೀತನಾಟ್ಯಗಳು ಕಾಮಪ್ರಚೋದಕ ಎಂದರೆ ಅನಂತರ ಅವುಗಳ ಪ್ರಸ್ತಾಪವೇ ಬರುವುದಿಲ್ಲ. ಇಷ್ಟೊಂದು ಭಯಂಕರ ರೀತಿಯಲ್ಲಿ ಅವರು ಸುರತ ಕ್ರೀಡೆಯಲ್ಲಿ ದಿನಗಳೆದರು ಎಂದು ಪ್ರತಿಪಾದಿಸುವುದೇ? ಹೋಗಲಿ, ಆ ದಿನ ಆಕೆ "ಮುಟ್ಟಿದ ಮನಂ ತೊಟ್ಟನೆ ಪಸಾಯದಾನಂಗೊಟ್ಟ" ಮೇಲೆ ಅರಮನೆಯಲ್ಲಿ ಯಾವತ್ತೂ ಅವನ 'ನುಣ್ದನಿ' ಕೇಳಿ ಬರುವುದೇ ಇಲ್ಲ. ಇದೆಂಥ ಸೋಜಿಗ! ಅಮೃತಮತಿಯನ್ನು ಜಾರಿಸಲು ಎಂಥ ನೆಪ! ಈ ಎಲ್ಲದರ ಉದ್ದೇಶ ಸ್ಪಷ್ಟವಾಗಿಯೇ ಇದೆ. ಕಥಾನಾಯಕನಾದ ಯಶೋಧರ ಹೆಣ್ಣಿನ ಮೋಹದಿಂದ ಬಿಡಿಸಿಕೊಂಡು ಉದ್ಧಾರವಾದರೆ ಸಾಕು, ಉಳಿದವರ ಗೊಡವೆ ಕವಿಗೇನು ಬೇಕು? ಏನಗ್ಗಳಮೊ ಕವೀಂದ್ರರಾ!

ಆದ್ದರಿಂದ ಅಮೃತಮತಿ ಒಮ್ಮೆ ಜಾರಿದ ಮೇಲೆ ಮೇಲೇರಬೇಕೆಂಬ ಇರಾದೆಯನ್ನು ಅವಳು ಅಪ್ಪಿತಪ್ಪೀ ಉಚ್ಚರಿಸದಂತೆ ನೋಡಿಕೊಂಡಿದ್ದಾನೆ ಕವಿ. ಪಾಶ್ಚಾತ್ಯ ದುರಂತ ಪಾತ್ರದ ಲಕ್ಷಣಕ್ಕೆ ಅಮೃತ ಮತಿಯ ಪಾತ್ರ ಹೊಂದುವುದೇ ಇಲ್ಲ. ದುರಂತ ಪಾತ್ರಗಳ ಇಚ್ಛಾ ಶಕ್ತಿ ಕೊನೆಯವರೆಗೂ ಅದಮ್ಯವಾಗಿದ್ದು ವಿಧಿಯ ವಿರುದ್ಧ ಹೋರಾಡುತ್ತಲೇ ಅವು ಸೋಲನ್ನಪ್ಪುತ್ತವೆ. ಅಂಥ ಸೋಲೂ ನಮಗೆ ಅಪ್ಯಾಯಮಾನವೆನಿಸುತ್ತದೆ. ಕುವೆಂಪು ಅವರು ಗುರ್ತಿಸಿರುವಂತೆ ಅಮೃತಮತಿಯ ಪಾತ್ರದಲ್ಲಿ ಈ ಯಾವ ಲಕ್ಷಣವೂ ಕಂಡು ಬರುವುದಿಲ್ಲ. ವಾಸ್ತವವಾಗಿ ಅವಳಿಗೆ ಅಂಥ ಇಚ್ಛಾಶಕ್ತಿಯೇ ಇಲ್ಲ. ಅದನ್ನು ಕವಿ ಯಾವತ್ತೋ ಹತ್ತಿಕ್ಕಿ ಬಿಟ್ಟಿದ್ದಾನೆ. ಅವಳ ವರ್ತನೆಯಿಂದ ಯಶೋಧರನಿಗೆ ಜಿಗುಪ್ಸಾ ಭಾವನೆ ಹುಟ್ಟಿದರೆ ತೀರಿತು ಆ ಪಾತ್ರದ ಕಾರ್ಯ ಮುಗಿದು ಅದು ನೇಪತ್ಯಕ್ಕೆ ಸರಿಯಬೇಕು, ಸರಿಯಿತು. ಹಾಗೆ ನೋಡಿದರೆ ಯಶೋಧರನ ಪಾತ್ರವೂ ಕೂಡ ರಕ್ತಮಾಂಸಗಳಿಂದ ಕೂಡಿದ ಮಾನವ ಗಾತ್ರದಲ್ಲಿ ಸಹಜ ವಿಕಾಸವನ್ನು ಪಡೆಯುವುದೇ ಇಲ್ಲ. ಈಗಾಗಲೇ ಗಿರಡ್ಡಿ ಗೋವಿಂದರಾಜರು ವಿಮರ್ಶಿಸಿರುವಂತೆ, ಇಲ್ಲಿ ವ್ಯಕ್ತಿಗಳು ಜೀವಂತ ಅರಳಿಕೊಳ್ಳುವುದೇ ಇಲ್ಲ.

"ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆನರರಂ" ಎಂದು ಕಾಮದ ವೈಚಿತ್ರ್ಯವನ್ನೂ ವಿಧಿವಿಲಾಸದ ರಹಸ್ಯವನ್ನೂ ಒಂದು ಗೂಡಿಸುವ ಈ ಕೃತಿಯ ಆಶಯ ಬಹಳ ಸೀಮಿತ. ಇಲ್ಲಿ ಮನುಷ್ಯ ಪ್ರಯತ್ನ ಏನೇನೂ ಇಲ್ಲ. ಭವ ಸಂಸಾರವೆಂದರೆ ಆತ್ಮನ ಬೇಟೆ ಮಾತ್ರವೆಂಬ ತನ್ನ ಪೂರ್ವ ನಿಶ್ಚಿತ ಸಿದ್ಧಾಂತಕ್ಕೆ ಬದ್ಧನಾಗಿ ಕವಿ ಬರೆಯತೊಡಗುತ್ತಾನೆ. ಪಾಪ ಭೀರುಗಳಾದ ಜೈನ ಗೃಹಸ್ಥರನ್ನು ಹೆದರಿಸಿ ಅವರು ಜಿನಧರ್ಮಕ್ಕೆ ಅಂಟಿಕೊಂಡಿರುವಂತೆ ಏರ್ಪಡಿಸುವುದಷ್ಟೇ ಜನ್ನನ ಕಾವ್ಯದ ಪರಮೋದ್ದೇಶವೆಂಬ ಮಾತು ಉಚಿತವೆನಿಸುತ್ತದೆ.[6]

ವಿಷಯ ಕಾಮನೆಗಳನ್ನುಳಿದು ಪ್ರಪಂಚದಲ್ಲಿ ಅನ್ಯ ವಿಷಯಗಳೇ ಇಲ್ಲವೆಂಬಂತೆ ಹೇಳಲಾಗುತ್ತದೆ. ಕಡೆಗೆ ಯುವರಾಜನಾದ ಯಶೋಮತಿ ಆಡಳಿತದಲ್ಲಿ ದಕ್ಷತೆಯನ್ನು ತೋರುವ

ಬದಲು, ತನ್ನ ತಾಯಿ ಮತ್ತು ಅವಳ ಮಿಂಡನಿಗೆ ಹೆಂಡ ಖಂಡಗಳನ್ನು ಸರಬರಾಜು ಮಾಡುವ ಸೇವಕನಾಂತಾದದ್ದು ಒಂದು ದುರ್ದೈವ. ಜೀವನೋತ್ಸಾಹವನ್ನು ತುಂಬುವುದಕ್ಕಿಂತ ವಿರಕ್ತಿಯನ್ನು ಜಾಹಿರಾತು ಮಾಡಲೆಂದು ಈ ಕಾವ್ಯ ರಚನೆಗೊಂಡಂತಿದೆ. ಆದ್ದರಿಂದ ಯಶೋಧರ ಚರಿತೆ ಎಷ್ಟೇ ರಂಜನೀಯ ಕಾವ್ಯವಾಗಿದ್ದರೂ ಅಷ್ಟರಮಟ್ಟಿಗೆ ಅದು ಕುಬ್ಜಕಾವ್ಯವಾಗಿ ಬಿಡುತ್ತದೆ; ಪಾತ್ರಗಳಂತೂ ಕಪ್ಪು - ಬಿಳುಪುಗಳಾಗಿ ಬಿಡುತ್ತವೆ.

ಸಾರಾಂಶವೆಂದರೆ, ಅಮೃತಮತಿ ಮತ್ತು ಅಷ್ಟಾವಂಕರು ಅವರ ದೈಹಿಕ ಸ್ಥಿತಿ ಹಾಗೂ ಮಾನಸಿಕ ಹಿನ್ನೆಲೆಯಿಂದ ನೋಡಿದರೆ, ಅವರಿಬ್ಬರೂ ಕಾಮ ಕೇಳಿಯಲ್ಲಿ ತೊಡಗಿದ್ದರೆಂಬುದು ಮನುಷ್ಯ ಮಾತ್ರ ದವರಿಂದ ಅಸಾಧ್ಯವೇ ಸರಿ. Humanly just impossible. ಇದನ್ನು ವೈದ್ಯ ವಿಜ್ಞಾನದ ನೆರವಿನಿಂದ ಹೀಗೆ ಸ್ಪಷ್ಟಪಡಿಸಲಾಗಿದೆ. ಪುರುಷನಾದ ಯಶೋಧರನ ಆತ್ಮವಿಕಸನಕ್ಕಾಗಿ ಮುಗ್ಧಳಾದ ಅವನ ಮನಃಪ್ರಿಯೆ ಅಮೃತಮತಿಯನ್ನು ಜನ್ನ ತನ್ನ ಮೂಗಿನ ನೇರಕ್ಕೆ ಕುಣಿಯುವ ಕಾಮದ ಬೊಂಬೆಯನ್ನಾಗಿಸಿ ಬಿಟ್ಟಿದ್ದಾನೆ. ಹೀಗಿದೆ ನಮ್ಮ ಪ್ರಾಚೀನ ಕವಿಗಳ ಸ್ತ್ರೀ ಪಾತ್ರಾಭಿವ್ಯಕ್ತಿ ವಿಧಾನ[7] ಅಮೃತಮತಿಯ ಪಾತ್ರ ಇದಕ್ಕೊಂದು ಜ್ವಲಂತ ನಿದರ್ಶನ.[8]

## ಟಿಪ್ಪಣಿಗಳು

೧. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿರುವ ಯಶೋಧರ ಚರಿತೆಯ ಗದ್ಯಾನುವಾದಕ್ಕೆ ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟರು ಮುನ್ನುಡಿ ಬರೆಯುತ್ತ ಅಮೃತಮತಿಯ ಪಾತ್ರದ ಬಗ್ಗೆ 'ಕಾಮುಕ ಹೆಣ್ಣು, ಜಾರ ಸ್ತ್ರೀ' ಎಂದೆಲ್ಲ ಕರೆದಿರುವುದು ತುಂಬ ಕೆಡುಕೆನಿಸುತ್ತದೆ. ಆಕೆಯನ್ನು ಬದಗನೊಂದಿಗೆ ಕೂಡಿಸಿದ್ದುದಕ್ಕಿಂತ ಅನ್ಯಾಯದ ಮಾತಿದು. ಗಂಡಸರ ಮರ್ಜಿಗೆ ಅವಳೀಗ ಇದ್ದಿದ್ದರೆ ಕೆಂಡಕಾರುತ್ತಿದ್ದಾಳೊ, ಕನಿಕರ ಪಡುತ್ತಿದ್ದಳೊ ನೋಡಬೇಕಿತ್ತು! ಸಾಕಿದವನ ತಪ್ಪಿಗೆ ದೀವಮೃಗವನ್ನು ನಿಂದಿಸುವುದೇಕೆ!

೨. ಗಿರಡ್ಡಿ ಗೋವಿಂದ ರಾಜು, ಜನ್ನನ ಯಶೋಧರ ಚರಿತೆ ವಿಮರ್ಶೆಯ ದಾರಿ, ಸಂಪಾದಕರು ಜಿ.ಎಸ್. ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾನಿಲಯ.

೩. ಕುಷ್ಠರೋಗವು 'ಮೈಕ್ರೋಬ್ಯಾಕ್ಟೀರಿಯಂ ಲೆಪ್ರೆ' ಎಂಬ ರೋಗಾಣುವಿನಿಂದ ಬರುವ ಬೇನೆ. ಚರ್ಮದಲ್ಲಿರುವ ನರಗಳಲ್ಲಿ ಇದರ ವಾಸ. ಆದ್ದರಿಂದ ಮೊದಲು ಸ್ಪರ್ಶ ಜ್ಞಾನ ಕುಂದುತ್ತದೆ. ಸೂಜಿ ಚುಚ್ಚಿದರೂ ನೋಯುವುದಿಲ್ಲ. ತಂಪು ಬಿಸಿಗಳ ವ್ಯತ್ಯಾಸ ತಿಳಿಯುವುದಿಲ್ಲ. ಇದೇ ಕುಷ್ಠದ ಲಕ್ಷಣ. ಕೈ ಕಾಲುಗಳ ಬೆರಳು ಸವೆದು ಹೋದಂತಾಗುತ್ತವೆ. ಬೆರಳುಗಳು ಒಣಗುತ್ತವೆ. ಗಾಯಗಳಿಂದ ಕೀವು ರಸಿಕೆ ಒಸರುತ್ತದೆ. ಅಂಗೈ ಅಂಗಾಲುಗಳ ಎಲುಬುಗಳ ಕೀಲುಗಳು ನಾಶವಾಗುತ್ತವೆ. ಅಂಕುಡೊಂಕಾದ ಬೆರಳುಗಳು ಒಣಗಿದ ಕೈಕಾಲುಗಳನ್ನು ನೋಡಿದರೆ ಬಹಳ ಕನಿಕರವೆನಿಸುತ್ತದೆ. ಮತ್ತು 'ಅಂಟು ಕುಷ್ಠ'ದ ಲಕ್ಷಣವೆಂದರೆ ಚರ್ಮದ ಮೇಲೆ ಚಿಕ್ಕ ದೊಡ್ಡದಾದ ಗಂಟುಗಳಾಗಿ ಚರ್ಮ ಮರಗಟ್ಟಿ ದಪ್ಪವಾಗುವುದು. ಕಿವಿಗಳು ದದ್ದು ಹಿಡಿದು ಗಂಟುಕಟ್ಟಿ ಜೋಲುವುವು. ಹುಬ್ಬುಗಳು ಗಂಟು ಗಂಟಾಗಿ ಕೂದಲು ಉದುರಿ ಹೋಗುವುವು. ಪಾದಗಳಲ್ಲಿ ಹುಣ್ಣುಗಳಾಗಿ ತೂಬುಗಳ ಕಂದಕದಂತೆ ಎಲುಬಿನವರೆಗೂ ಕಾಣಿಸಿಕೊಂಡು ವಿಕಾರವೂ ಕಠೋರವೂ ಆಗುತ್ತವೆ. ರೆಪ್ಪೆಗಳು ಬಡಿಯಲಾರದೆ ಶಕ್ತಿಹೀನವಾಗುತ್ತವೆ. ಕಣ್ಣು ಗುಡ್ಡೆಗಳ ಸ್ಪರ್ಶಜ್ಞಾನ ಹೋಗುತ್ತದೆ. ಗಾಳಿ ಧೂಳಿಗೆ ಕಣ್ಣುಗಳಲ್ಲಿ ಗಾಯಗಳಾಗಿ ಮಾಯದೆ, ಕೀವು ತುಂಬಿ ಹಾಳಾಗುತ್ತವೆ. ಇಲ್ಲವೆ ಕಣ್ಣು ಕುರುಡಾಗುತ್ತವೆ.

ಇನ್ನು ಕುಷ್ಠರೋಗದಿಂದ ಪುರುಷರ ಲೈಂಗಿಕ ಗ್ರಂಥಿಗಳು ಕೃಶವಾಗಿ ಮೆತ್ತಗಾಗಿ ಚಿಕ್ಕದಾಗುತ್ತವೆ. ರೋಗಿಯ ಜನನಾಂಗಗಳಿಗೆ ಬೇಕಾದ ರಸೋತ್ಪತ್ತಿಯಾಗದೆ, ವೀರ್ಯದಲ್ಲಿ ವೀರ್ಯಾಣುಗಳು ಕಡಿಮೆಯಾಗುತ್ತವೆ. ಕ್ರಮೇಣ ಆತ ಷಂಡನಾಗುತ್ತಾನೆ. ಇಲ್ಲಿ ಗಮನಾರ್ಹ ಅಂಶವೆಂದರೆ ಈ ರೋಗ ಮೆದುಳಿಗೆ ಹತ್ತುವುದಿಲ್ಲ. ಅದರ ಶಕ್ತಿ ಯಥಾ ರೀತಿ ಇರುತ್ತದೆ. ಆದ್ದರಿಂದ ವ್ಯಕ್ತಿ ಚಿಂತಿತನಾಗಿ ತನ್ನ ಜನ್ಮಾಂತರದ ಕರ್ಮಫಲವೆಂಬ ಪಾಪ ಪ್ರಜ್ಞೆಯಿಂದ ಸದಾ ದುಃಖಿಸುತ್ತಿರುತ್ತಾನೆ.
(ಡಾ. ಎಚ್.ವಿ. ಕೃಷ್ಣಮೂರ್ತಿ. ಚರ್ಮರೋಗಗಳು, ಬೆಂಗಳೂರು ವಿಶ್ವವಿದ್ಯಾಲಯ)

೪. ಬಾಬಾ ಆಮ್ಟೆಯವರು ಯುವಕರಾಗಿದ್ದಾಗ ಭಯವರಿಯದ ಕಲಿಯಾಗಿದ್ದರು. ಹುಲಿಗೆ, ಕಳ್ಳಕಾಕರಿಗೆ, ಕಡೆಗೆ ಆಂಗ್ಲ ಸೈನ್ಯಕ್ಕೂ ಅವರು ಹೆದರಿದವರಲ್ಲ. ಆದರೆ ಒಮ್ಮೆ ಹೆದರಿದರು. ಸ್ವಯಂ ಸೇವಕರಾಗಿ ಮಲ ಹೊರುವ ವೃತ್ತಿಯನ್ನು ಮಾಡುತ್ತಿದ್ದ ಅವರು ಒಮ್ಮೆ ತಮ್ಮ ಪಾಳಿಯನ್ನು ಪೂರೈಸಿ ಮನೆಗೆ ಹೊರಟಾಗ ವರೋರ ಪಟ್ಟಣ (ಮಹಾರಾಷ್ಟ್ರ)ದ ರಸ್ತೆ ಬದಿಯಲ್ಲಿ ಮೂಟೆಯಂತಹ ವಸ್ತುವೊಂದು ಬಿದ್ದಿರುವುದನ್ನು ಕಂಡರು. ಅದರ ಹತ್ತಿರ ಹೋಗಿ ನೋಡಿದರೆ ಅದು ಮೂಟೆ ಅಲ್ಲ, ಅದು ಜೀವವುಳ್ಳ ಮನುಷ್ಯ. ಚಳಿಗಾಳಿಗೆ ಆ ಪ್ರಾಣಿ ನಡುಗುತ್ತಿತ್ತು. ಆಮ್ಟೆಯವರು ಇನ್ನೂ ಹತ್ತಿರ ಸರಿದು ನೋಡಿದಾಗ ಅವನೊಬ್ಬ ಕುಷ್ಠರೋಗಿ. ಅದು ಉಲ್ಬಣಾವಸ್ಥೆಗೆ ತಿರುಗಿ ಕೊಳೆಯುತ್ತಿದ್ದ ಮಾಂಸದ ಮುದ್ದೆಯೆಂದು ಗೊತ್ತಾಯಿತು. ಅವನಿಗೆ ಮೂಗಿರುವ ಕಡೆ ಮೂಗೇ ಇರಲಿಲ್ಲ. ಅಲ್ಲಿ ಮೂಗಿನ ಎರಡು ರಂಧ್ರಗಳು ಮಾತ್ರ ಇದ್ದುವು. ಕೈ ಕಾಲುಗಳ ಬೆರಳುಗಳೆಲ್ಲವೂ ಸಂಪೂರ್ಣವಾಗಿ ಹೊರಟು ಹೋಗಿದ್ದವು. ಕಣ್ಣುಗಳು ಕೊಳೆತು ಅಲ್ಲಿ ಹುಳುಗಳು ಪಿತುಗುಟ್ಟುತ್ತಿದ್ದವು. ಮನುಷ್ಯನ ಈ ಸ್ಥಿತಿಯನ್ನು ಕಂಡು ಹೆದರಿದ ಆಮ್ಟೆ ತಮ್ಮ ಜೀವನದಲ್ಲಿ ಮೊದಲ ಬಾರಿಗೆ ಭಯ ಪೀಡಿತರಾಗಿ ಮನೆಗೆ ಓಡಿದರು. (ಡಾ. ಎಚ್.ವಿ. ಕೃಷ್ಣಮೂರ್ತಿ. ಬಾಬಾ ಆಮ್ಟೆ, ಪುಟ-೨೮)

೫. ಇಂಥ ವಿವರಗಳಿಗೆ ನೋಡಿ 'ಬೆನ್‌ಹರ್' ಎಂಬ ಪ್ರಸಿದ್ಧ ಆಂಗ್ಲ ಸಿನಿಮಾ.

೬. ಗಿರಡ್ಡಿ ಗೋವಿಂದರಾಜ ಜನ್ನನ ಯಶೋಧರ ಚರಿತೆ, ಸಂಪಾದಕರು, ಜಿ.ಎಸ್. ಶಿವರುದ್ರಪ್ಪ, ವಿಮರ್ಶೆಯ ದಾರಿ, ಬೆಂಗಳೂರು ವಿಶ್ವವಿದ್ಯಾಲಯ.

೭. ಶಿವರಾಮಯ್ಯ, ಪುಟ-೯೫, ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ, ಕರ್ನಾಟಕ ಸಾಹಿತ್ಯಅಕಾಡೆಮಿ.

೮. ಕನ್ನಡ ಕಾವ್ಯಲೋಕದಲ್ಲಿ ಅಮೃತಮತಿಯ ಪ್ರಸಂಗ ಒಂದು Redhot spot ಇದ್ದಂತೆ. ಅನೇಕ ಜನ ಸೃಜನಶೀಲ ಲೇಖಕರು ಯಶೋಧರ ಚರಿತೆಯನ್ನು ಆಧರಿಸಿ ಕಥೆ, ಕಾದಂಬರಿ, ನಾಟಕ, ಕವನ ಇತ್ಯಾದಿ ರಚಿಸಿ ಧನ್ಯರಾಗಿದ್ದಾರೆ.

## ಆಕರ ಗ್ರಂಥಗಳು


೧. ವಿಮರ್ಶೆಯ ದಾರಿ - ಸಂಪಾದಕರು ಜಿ.ಎಸ್. ಶಿವರುದ್ರಪ್ಪ, ಬೆಂಗಳೂರು ವಿಶ್ವವಿದ್ಯಾಲಯ

೨. ದ್ರೌಪದಿಯ ಶ್ರೀಮುಡಿ - ಕುವೆಂಪು

೩. ಕಾವ್ಯ ಸಮೀಕ್ಷೆ - ತೀ.ನಂ.ಶ್ರೀ

೪. ಯಶೋಧರ ಚರಿತೆ (ಗದ್ಯಾನುವಾದ) ತೆಕ್ಕುಂಜೆ ಗೋಪಾಲಕೃಷ್ಣಭಟ್ಟ

೫. ಬಾಬಾ ಆಮ್ಟೆ - ಡಾ. ಎಚ್.ವಿ. ಕೃಷ್ಣಮೂರ್ತಿ

೬. ಚರ್ಮರೋಗಗಳು - ಡಾ. ಎಚ್.ವಿ. ಕೃಷ್ಣಮೂರ್ತಿ

# ಕಲೆ - ಸಂಸ್ಕೃತಿ ಹಾಗೂ ಪರಂಪರೆ

- ರಾಜಶೇಖರ ಸಿ. ಕಂಬಾರ

ಸಾಂಸ್ಕೃತಿಕ ಮತ್ತು ಪಾರಂಪರಿಕ ರಾಯಭಾರತ್ವದ ಮೇಲೆ ಒಂದು ದೇಶದ ಬೆಳವಣಿಗೆ ನಿಂತಿದೆ ಎಂದು ಸೂಕ್ಷ್ಮವಾಗಿ ಮತ್ತು ಅಷ್ಟೇ ಎಚ್ಚರಿಕೆಯಿಂದ ಹೇಳ ಬಯಸುತ್ತೇನೆ. ಏಕೆಂದರೆ ಇವು ಕೇವಲ ಪ್ರಮೋಟರ್ ಆಗಿಬಿಡುವ, ಹಾಗೆ ಅನ್ನಿಸಿಬಿಡುವ ಸಾಧ್ಯತೆಯೇ ಹೆಚ್ಚು. ಹಾಗೆ ಅನ್ನಿಸಿದಾಗ ಆ ಜ್ಞಾನವು ಕೇವಲ 'touch and go' ಬಗೆಯದ್ದಾಗಿ ಕಾಣಿಸಲೂಬಹುದು. ಹಾಗಾದಾಗ, ಆ ದೇಶದ ಸಮೂಹ ಪ್ರಜ್ಞೆಗೆ ಇಂಬು ಕೊಡುವಂಥ ಶಕ್ತಿಯನ್ನು ನಮ್ಮ ಸಂಸ್ಕೃತಿ ಹಾಗೂ ಪರಂಪರೆಗಳು ಕಳೆದುಕೊಳ್ಳಬಹುದು.

ಒಂದು ದೇಶದ ಜ್ಞಾನಾಂತಿಕ ಹಸಿವನ್ನ ಕೇವಲ ಪರಂಪರೆಯಿಂದೊಡಮಾಡಿದ ಸಂಸ್ಕೃತಿಯಿಂದ ತಣಿಸಲು ಸಾಧ್ಯವೋ ಅಥವಾ ಸಂಸ್ಕೃತಿಯ ದಿಕ್ಸೂಚಿಯಾದ ಪರಂಪರೆಯಿಂದ ತಣಿಸಲು ಸಾಧ್ಯವೋ ಎಂದು ಹೇಳಲಾಗುವುದಿಲ್ಲ. ಏಕೆಂದರೆ ಇವೆರಡೂ ಸಮಷ್ಠಿ ಬದುಕಿನ ಸಾರವನ್ನು ಸಮಗ್ರವಾಗಿ ಹಿಡಿದಿಟ್ಟಿರುತ್ತವೆ ಮತ್ತು ಸಮೂಹ ಸೃಷ್ಟಿ, ಹಾಗೂ ಸಮೂಹ ಪ್ರಜ್ಞೆ ಇವೆರಡರ ಜೀವಾಳ. ಈ ಪೀಠಿಕೆಯ ಹಿನ್ನೆಲೆಯಲ್ಲಿ ಸಂಸ್ಕೃತಿಯನ್ನು ವಿಶ್ಲೇಷಿಸಿದಾಗ ಮಾನವನು ತನ್ನ ಜೀವನದಲ್ಲಿ 'ಕ್ರಿಯಾತ್ಮಕವಾಗಿ' ಗಳಿಸಿಕೊಂಡಿದ್ದೆಲ್ಲಾ ಸಂಸ್ಕೃತಿಯ ಭಾಗವಾಗಿ ಉಳಿಯುತ್ತದೆ. ಈ ಎಲ್ಲಾ ಗಳಿಕೆಗಳು ಒಂದು ಜನಾಂಗದಿಂದ ಮತ್ತೊಂದು ಜನಾಂಗಕ್ಕೆ ತಲುಪಿ ಸಾಕಾರಗೊಳ್ಳುವುದೇ ಪರಂಪರೆಯಾಗುತ್ತದೆ. ಇಂಥ ಗಳಿಕೆಗಳಲ್ಲಿ ಕಲೆ ಬಹಳ ಉತ್ಕೃಷ್ಟವಾದದ್ದು.

ಕಲೆ ಎನ್ನುವುದು ಕೇವಲ ಮಾನವನ ವೈಯಕ್ತಿಕ ಆಶೋತ್ತರಗಳಿಗೆ ಒಡ್ಡಿದ ಕನ್ನಡಿಯಲ್ಲ. ಹಾಗೆ ಹೇಳುವುದಾದರೆ, ಆತನ ಭಾವಗಳ ಫಲಿತಾಂಶವೂ ಅಲ್ಲ. ಕಲೆ ಮಾನವನ ಹಿಡಿದಿಟ್ಟ ಭಾವಗಳ ಜೊತೆಗೆ ಸಮಾಜದೊಂದಿಗಿನ ಘರ್ಷಣೆಯಿಂದಾಗಿ ಉದ್ಭವಿಸುವ ಒಂದು ಪ್ರಜ್ಞೆ. ಈ ಪ್ರಜ್ಞೆಯ ಹರಿವು ಸತ್ಯವನ್ನು ಬಂಧಿಸುವುದಕ್ಕಾಗಿಯೇ ವಿನಹ ಅರ್ಥಕ್ಕೊಗ್ಗದ ಅನುಭವಕ್ಕಾಗಿಯಲ್ಲ. ಇಂಥಾ ಸತ್ಯವನ್ನು ಹೊರಗೆಡಹಿದಾಗ ಮಾತ್ರ ಜೀವನಾನುಭವವನ್ನು ಕಲೆಯ ಮೂಲಕ ಸ್ಫುರಿಸುವ ಸ್ವಾತಂತ್ರ್ಯವನ್ನು ಅದರ ಮೂಲ ಕೃತಿಕಾರ ಪಡೆಯುತ್ತಾನೆ ಹಾಗೂ ಇತರರು ಆ ಕೃತಿಯನ್ನು ಆಸ್ವಾದಿಸುತ್ತಾರೆ. ಕೃತಿಕಾರನ ಅನನ್ಯತೆ ಪ್ರಕಟಗೊಳ್ಳುವುದು ಇಲ್ಲಿಯೇ. ಹಾಗೆ ಪ್ರಕಟಣೆಗೊಂಡಾಗ ಪರಂಪರೆ ಅವನಿಗೆ ಸಹಾಯಕವಾಗುತ್ತದೆ. ಅನುಭವಿಸುವವರ ತಿಳುವಳಿಕೆಗೆ ಮೀರಿದ್ದು ಒಮ್ಮೆಲೆ ಗೋಚರವಾಗುವುದು ಈ ಪರಂಪರೆಯಿಂದಾಗಿಯೇ ಅಂದರೆ ಒಂದು ಜನಾಂಗದ ಸಂಸ್ಕೃತಿಯ ವಾಹಕವಾದ ಪರಂಪರೆಯು ಇನ್ನೊಂದು ಜನಾಂಗದ ಜೀವನದಲ್ಲಿ ಸುಪ್ತವಾಗಿ ಹರಿಯುತ್ತಲೇ

ಇರುತ್ತದೆ. ಈ ಸುಪ್ತತೆ ಕಲೆಯನ್ನು ಅರ್ಥೈಸುವ ಒಂದು ಮುಖ್ಯವಾದ ಸಾಧನವಾಗಿ ಏರ್ಪಡುತ್ತದೆ. ಉದಾಹರಣೆಗೆ ಸಂಗ್ಯಾ-ಬಾಳ್ಯಾ ನಾಟಕವು ಈಗಲೂ ಅನೇಕ ಅರ್ಥಗಳನ್ನು ಏಕಕಾಲಕ್ಕೆ ಬಿಂಬಿಸುವ ಒಂದು ಅಪರೂಪದ ನಾಟಕ. ಈ ಕಾಲದಲ್ಲಿ ಮೂಲ ಜೀವನದ ಸಹಜ ಪ್ರವೃತ್ತಿಯಡೆಗೆ ಮನುಷ್ಯನ ಸೆಳೆತವು ಆಮೂಲಾಗ್ರ ಜೀವನದ ಅನುಭೂತಿಯ ಸಾಧನವಾಗಿರಬಹುದು ಅಥವಾ ಆ ಅನೂಭೃತಿ. ತನ್ನ ಪರಿಸರದಲ್ಲಿಯೇ ಪರಂಪರೆಗೆ ಒಂದು ಭಿನ್ನವಾದ ದೃಷ್ಟಿಕೋನ ಕೊಟ್ಟಂಥ ಸೂಕ್ಷ್ಮ ಅಂಶವಾಗಿರಲೂ ಸಾಕು. ಪತ್ತಾರ ಮಾಸ್ತರನಿಗೆ ತನ್ನ ಸಂಸ್ಕೃತಿಯ ಪರದೆಯಡಿಯಲ್ಲಿ, ತನ್ನ ಸಮಕಾಲೀನ ಸಂದರ್ಭದಲ್ಲಿ ನಡೆದ ಈ ಘಟನೆ ಹೆಚ್ಚು ಪ್ರಬಲವಾಗಿ ಕಂಡಿದ್ದರೆ, ಇಂದಿನ ಓದುಗರಿಗೆ ನೋಡುಗರಿಗೆ ಇದಕ್ಕಂಟಿಕೊಂಡಂತೆ ಇನ್ನೂ ಹೆಚ್ಚಿನ ಅಂಶಗಳು ಕಂಡಿರಲೂಬಹುದು.

ಕೃತಿಕಾರ ಸಮಾಜದೊಂದಿಗಿನ ಘರ್ಷಣೆಯಿಂದಾಗಿ ಪಡೆದುಕೊಂಡ ಗಳಿಕೆಗಳನ್ನೆಲ್ಲಾ ಕ್ರೋಢೀಕರಿಸಿ, ಮೂಲ ತಿರುವಿಗೆ ಮತ್ತಷ್ಟು ಚಾಲನೆ ಕೊಟ್ಟು ಹೊಸ ಅರ್ಥಗಳನ್ನು ಹೊಳೆಯಿಸುವಲ್ಲಿ ಸಫಲನಾಗುತ್ತಾನೆ. ಈ ದೃಷ್ಟಿಕೋನದಿಂದ ಕಲೆಯು ಸಾಮೂಹಿಕ ಸೃಷ್ಟಿಗೆ ತನ್ನನ್ನು ತಾನು ಒಳಪಡಿಸಿಕೊಳ್ಳುತ್ತದೆ. ಹೀಗಾದಾಗ ಕೃತಿಕಾರ ತನ್ನ ಅನನ್ಯತೆಯನ್ನು ಕಾಯ್ದುಕೊಳ್ಳಲು ಕಾಪಾಡಿಕೊಳ್ಳಲು ಹೆಣಗಾಡಬೇಕಾಗುತ್ತದೆ. ಕೆಲವೊಮ್ಮೆ ಕೃತಿಕಾರನ ಅನನ್ಯತೆಯೂ ಕೂಡ ಸಮಾಜದಲ್ಲಿನ ಗ್ರಹಿಕಾ ಸಾಮರ್ಥ್ಯದ ಒತ್ತಡದಿಂದಾಗಿ ತನ್ನ ಪರಿಧಿಯನ್ನು ಹಿಗ್ಗಿಸಿಕೊಳ್ಳುತ್ತಾ ಕೆಲವೊಮ್ಮೆ ಕುಗ್ಗಿಸಿಕೊಳ್ಳುತ್ತಾ ಪರಂಪರೆಯೊಂದಿಗೆ ಹೆಜ್ಜೆ ಹಾಕಬೇಕಾಗುತ್ತದೆ. ಕಲೆಯ ನಿಜವಾದ ಅರ್ಥ ಮತ್ತು ಕೃತಿಕಾರನ ಸೃಜನ ಶಕ್ತಿ ಪ್ರಕಟಗೊಳ್ಳುವುದು ಇಲ್ಲಿಯೇ.

ಅನನ್ಯತೆಯ ಕಲ್ಪನೆ ತೀರ ಹೊಸದಾದ್ದರಿಂದ, ಕೃತಿಕಾರನ ಸೃಜನಶಕ್ತಿಗೆ ಇಂಬುಕೊಡುವಂಥ ಪ್ರಯತ್ನವೂ ಇಂದಿನದೇ. ಈ ಹೊಸ ಪರಿಕಲ್ಪನೆಯ ಅಡಿಯಲ್ಲಿ ಅನುಭವ ಒಬ್ಬರದಾಗಿ, ಅದರ ಒಟ್ಟಾರೆ ತಿಳುವಳಿಕೆ ಇನ್ನೊಬ್ಬರದಾಗಿ ಬಿಡುವ ಹೆದರಿಕೆ ಹೆಚ್ಚಾದ್ದರಿಂದ, ಒಂದು ಕೃತಿಯ ಮೌಲ್ಯದ ಕಡೆಗೆ ಹೆಚ್ಚು ಗಮನ ಹರಿಸಬೇಕಾಗುತ್ತದೆ. ಇದರಿಂದಾಗ ವಾಸ್ತವವಾದ ಜೀವನಾನುಭವದಲ್ಲಿನ ಹುಡುಕಾಟಕ್ಕೆ ಮತ್ತಷ್ಟು ಚಾಲನೆ ಬಂದಂತಾಗಿ ಪರಂಪರೆಯ ನಡೆಯನ್ನು ವಿಮುಖಗೊಳಿಸುವುದು ಅನಿವಾರ್ಯವಾಗಬೇಕಾಗುತ್ತದೆ. ಈ ವಿಮುಖತೆಯೇ (ಒಂದು – ನಿರ್ದಿಷ್ಟ ಗುರಿಯನ್ನು ಹೊಂದಿದ) ಒಂದು ಕೃತಿಯ ಮೌಲ್ಯವನ್ನು ಅಳೆಯುವ ಮಾನದಂಡವಾಗಿ ಪರಿವರ್ತಿತವಾಗುವ ಸಾಧ್ಯತೆಯೂ ಹೆಚ್ಚು.

ದೃಶ್ಯ ಮಾಧ್ಯಮ ಕಲಾ ಪ್ರಭೇದಗಳಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ. ಬಹುಶಃ ಇದು ಶ್ರವಣ ಜ್ಞಾನವನ್ನು ಮೀರಿ ಹೆಚ್ಚು ವಾಸ್ತವವಾದಂಥ ನೋಟಕ್ಕೆ ಒತ್ತು ಕೊಟ್ಟಿದ್ದರಿಂದ ಇದರ ಪ್ರಾಮುಖ್ಯತೆ ಇಮ್ಮಡಿಗೊಳ್ಳಲು ಕಾರಣವಿರಬಹುದು. ಈ ಮುಂಚೆ – ಅಂದರೆ ಬ್ರಿಟೀಷರು ನಮ್ಮನ್ನು ಆಳುವ ಮೊದಲು ತೋಂಡಿ ಪರಂಪರೆಯೇ ನಮ್ಮ ದೈನಂದಿನ ವ್ಯವಹಾರದ ಜೀವಾಳವಾಗಿತ್ತು. ನಂತರದ ದಿನಗಳಲ್ಲಿ ನೋಟವನ್ನು ನಂಬಲು ಶುರುವಾದಂದಿನಿಂದ ಇಂದಿನವರೆಗೂ, ಆ ಮಾಧ್ಯಮ – ದೃಶ್ಯ ಮಾಧ್ಯಮ– ನಮ್ಮನ್ನು ಒಂದಲ್ಲ ಒಂದು ಕುತೂಹಲಹಲರ ಕೂಪಕ್ಕೆ ತಳ್ಳುತ್ತಾ ಬಂದಿದೆ. ಈ ಮಾಧ್ಯಮವು ಕಲೆಯನ್ನು ಹೆಚ್ಚು ವಾಸ್ತವ ದೃಷ್ಟಿಕೋನದಿಂದ

ನೋಡಬೇಕೆಂಬುದನ್ನ ಕಲಿಸಿಕೊಟ್ಟಿತಲ್ಲದೇ, ನಮ್ಮ ಬೇಡಿಕೆಗಳು ಕೂಡ ಹೆಚ್ಚು ವಾಸ್ತವತೆಯತ್ತ ತಿರುಗುವಂತೆ ಮಾಡಿದ ತೃಪ್ತಿ ಈ ಮಾಧ್ಯಮದ್ದು. ಇದಕ್ಕೆ ಸಿನಿಮಾ ಉತ್ತಮ ಉದಾಹರಣೆ.

ಮೊದಮೊದಲು ತೋಂಡಿ ಪರಂಪರೆಗೆ ಒತ್ತುಕೊಟ್ಟು ಕೇಳುತ್ತಿದ್ದ ಕತೆಗಳಿಗೆ ಈಗ ದೃಶ್ಯದ ಮೆರಗು ಸೋಕಿ, ಅದು ಇಡೀ ಜನಾಂಗದ ಸೃಜನಶಕ್ತಿಗೆ ಪೆಟ್ಟುಕೊಟ್ಟಿತು ಎಂದರೆ ತಪ್ಪಾಗಲಾರದು. ಏಕೆಂದರೆ, ಒಂದು ದೃಶ್ಯ ನಿರೂಪಿಸಿದಾಗ ಕೇಳುಗರು ಅದನ್ನು ಗ್ರಹಿಸುತ್ತಿದ್ದ ರೀತಿ, ಈಗ ಬದಲಾಗುತ್ತಾ ಒಂದು ಸಿದ್ಧವಾದ ಉತ್ಪನ್ನವನ್ನು ಜನರಿಗೆ ಕೊಡುತ್ತ ಬಂದಿತು. ನೀತಿಯುಕ್ತ ಮನರಂಜನೆಯೇ ಮೂಲ ಉದ್ದೇಶವಾಗಿದ್ದ ಅಂದಿನ ಚಿತ್ರಗಳು ನಂತರದ ದಿನಗಳಲ್ಲ ತನ್ನ ಮೂಲ ಉದ್ದೇಶವನ್ನು, ಮೊದಲಿನ ಮುಗ್ಧತೆಯನ್ನ ಕಳೆದುಕೊಂಡು ಕೇವಲ ದೃಶ್ಯ ಸಂಯೋಜಕವಾಗಿ ಪರಿಣಮಿಸಿರುವುದು ದುರದೃಷ್ಟಕರ. ಈ ದೃಶ್ಯಮಾಧ್ಯಮಗಳು ಸಮಾಜದಲ್ಲಿ ತೀರಾ ಭಿನ್ನವಾದ ಅಭಿರುಚಿಯನ್ನು ನೆಲೆ ಮಾಡುವಲ್ಲಿ ಸಫಲವಾದವು. ಸಮಾಜದ ಒಂದು ತಪ್ಪು ಕೂಡ ಇದಕ್ಕೆ ನಾಂದಿ ಹಾಡಿದೆ. ಅದೇನೆಂದರೇ, "ಮಾಧ್ಯಮ ಬದಲಾದಾಗ ಅದರಿಂದ ಹೊರಡುವ ಸತ್ಯವೂ ಬದಲಾಗುವುದು" ಎಂಬ ಸತ್ಯವನ್ನು ಅರಿಯದಿರುವುದು ಜನರು ಸಿನೆಮಾದಲ್ಲಿನ ಹೆಚ್ಚು ನಿಖರವಾದ ವಾಸ್ತವತೆಗೆ ಗಂಟುಬಿದ್ದು ನಾಟಕವನ್ನು ಮೂಲೆಗುಂಪು ಮಾಡಿದರು. ಚಿತ್ರ ಮಾಧ್ಯಮದ ಪ್ರಾಬಲ್ಯ ಹೆಚ್ಚಾಗುತ್ತ ಜನರ ಅಭಿರುಚಿಯೂ, ಆಶೋತ್ತರಗಳೂ, ಮೌಲ್ಯದ ಕಲ್ಪನೆಯೂ ಭಿನ್ನವಾಗತೊಡಗಿದವು. ಮೊದಲಿಗೆ ಒಟ್ಟಾರೆ ಮನರಂಜನೆಯ, ಮೌಲ್ಯದ ಪ್ರತೀಕವಾಗಿದ್ದ ಸಿನೇಮಾ, ನಂತರ ಆಂಶಿಕವಾಗಿ ತನ್ನ ಇರುವನ್ನು ನಿಯಮಿತಗೊಳಿಸಿಕೊಂಡಿತು. ನಾಟಕವು ದೃಶ್ಯಗಳನ್ನು, ಚಿತ್ರಗಳನ್ನು, ಪಾತ್ರಗಳನ್ನು ರಂಗದ ಮೇಲೆ ಕಾಣಿಸಿದರೂ ಸಿನೆಮಾದ ಯಥಾವತ್ತತೆಯ ಇದಿರು ಸೋಲಲೇಬೇಕಾಯಿತು. ಕಲೆಯ ಸ್ವರೂಪ ಬದಲಾದಾಗೆಲ್ಲಾ ಕಲೆಯ ನಿಯಮಗಳೂ ಬದಲಾಗಬೇಕೆಂಬುದೇನೂ ಇಲ್ಲ. ಆದರೆ ನಿಯಮಗಳೂ ಬದಲಾದರೆ ಇಡೀ ಕಲಾ ಪರಂಪರೆಯ ಅರ್ಥ ಪಲ್ಲಟವಾಗುತ್ತದೆ.

ವರ್ಣಚಿತ್ರದ ಮಟ್ಟಿಗಂತೂ ಇಂತಹ ಹೆದರಿಕೆಯೇ ಇಲ್ಲ. ಏಕೆಂದರೆ ಅದು ಒಂದು ಕವನದ ಹಾಗೆ, ಅದು ಒಂದು ರೂಪಕವೂ ಹೌದು. ಈ ಕಲೆಯನ್ನು ಆಸ್ವಾದಿಸುವವರು ಹೆಚ್ಚಾಗಿ ಕಲಿತ ಮಂದಿ ಮತ್ತು ಈ ರೂಪಕವನ್ನು ತಮ್ಮ ಜೀವನಾನುಭವಕ್ಕೆ ಸಮೀಕರಿಸುವ ಸಾಮರ್ಥ್ಯ ಉಳ್ಳವರು ಮಾತ್ರ. ಇದು ಇಡೀ ಸಮೂಹಕ್ಕೆ ತನ್ನ ಚಲನಹೀನತೆಯಿಂದಾಗಿ ಪರಿಣಾಮಕಾರಿಯಾಗಲಾರದು. ಆದರೆ ಇದು, ಒಬ್ಬ ಕೃತಿಕಾರನ ವೈಯಕ್ತಿಕ ಅನುಭವವನ್ನ ಇಡೀ ಸಮಷ್ಠಿ ಬದುಕಿಗೆ ಸಮೀಕರಿಸಿಕೊಳ್ಳುವ ಅತ್ಯಂತ ಹತ್ತಿರದ ವೈಯಕ್ತಿಕ ಸಾಧನ.

---

# ಒಡಕು ವ್ಯಕ್ತಿತ್ವದ ಕಲಾಪೂರ್ಣ ರಚನೆ ಗಿರೀಶ ಕಾರ್ನಾಡರ ನಾಟಕ

- ಡಾ. ಆರ್.ವಿ. ಭಂಡಾರಿ

ಗಿರೀಶ ಕಾರ್ನಾಡರು ಅಗ್ರಮಾನ್ಯ ನಾಟಕಕಾರರಲ್ಲಿ ಒಬ್ಬರು. ಅವರ ವೈಚಾರಿಕತೆಯ ನವೀನತೆ ಒಂದು ಮಟ್ಟದ ಆಕರ್ಷಣೆಯ ಪಾಲನ್ನು ಹೊಂದಿದ್ದರೆ ನಾಟಕದ ಇತರ ಅಂಶಗಳು ಅವರನ್ನು ದೊಡ್ಡ ನಾಟಕಕಾರನ್ನಾಗಿ ಮಾಡಿದೆ. ಆ ಮುಖ್ಯವಾದ ಅಂಶಗಳೆಂದರೆ ನಾಟಕದ ರಂಗಸಾಧ್ಯತೆ; ಅದಿಲ್ಲದಿದ್ದರೂ ಸಂಭಾಷಣೆಯ, ವ್ಯಕ್ತಿತ್ವದ ಸಂಕೀರ್ಣ ಆಯಾಮ ಮತ್ತು ವರ್ತನೆಯ ನಾಟ್ಯಮಯತೆಯೇ ಆಗಿದೆ. ಹೀಗಾಗಿ ಗಿರೀಶರ ನಾಟಕ ಕುರಿತು ಹೇಳುವ ಮಾತು ಕೂಡ ಸಂಕೀರ್ಣವಾಗಿ ಬಿಡುವುದೇ ಹೆಚ್ಚು. ಈ ಸಂಕೀರ್ಣತೆಗೆ ಇನ್ನೊಂದು ಮುಖ್ಯ ಕಾರಣವೆಂದರೆ ಗಿರೀಶರು ಸಮಕಾಲೀನತೆಗೆ - ಅದರ (ರಾಜಕಾರಣಕ್ಕೆ) ವೈಚಾರಿಕತೆಗೆ ತೋರುವ ಪ್ರತಿಕ್ರಿಯೆ ಕೂಡ ಆಗಿದೆ. ಅವರು ಏಕಕಾಲಕ್ಕೆ ಪ್ರಜಾಪ್ರಭುತ್ವವಾದಿ ಪ್ರಕ್ರಿಯೆಗೂ ಮನುಷ್ಯರ ಒಡಕು ವ್ಯಕ್ತಿತ್ವವನ್ನುಳ್ಳ ಮತ್ತು ಅಸಂಬದ್ಧತೆಗೂ ಸಂಕೀರ್ಣವಾಗಿ ಸ್ಪಂದಿಸುತ್ತಾರೆ.

'ಯಯಾತಿ'ಯಲ್ಲಿಯೇ ಈ ಒಡಕು ವ್ಯಕ್ತಿತ್ವ ಮತ್ತು ಅಸಂಗತ ತತ್ವಜ್ಞಾನದ ಪ್ರಾರಂಭವಾಗುತ್ತದೆ.

"ಪುರು ಆಧುನಿಕ ಕಾಲದ ಅನಾಥ ಪ್ರಜ್ಞೆಯ, ಏಕಾಕಿತನದ ಸಂಕೇತವಾಗಿದ್ದಾನೆ. ಅಲ್ಲಿ (ಮೂಲದಲ್ಲಿ) ಯಯಾತಿ ಸಮಸ್ಯೆಯ ಪರಿಹಾರವಾಗಿ ಮಾತ್ರ ಬರುತ್ತಾನೆ. ಪುರು ಎದುರಿಸಬೇಕಾದ ಜೀವಿತದ ಸಮಸ್ಯೆ ಈ ನಾಟಕದ ಜೀವಾಳವಾಗಿದೆ... ಸ್ವಂತ ವ್ಯಕ್ತಿತ್ವದ ಬೇರುಗಳನ್ನು ತನ್ನ ವಂಶದಲ್ಲಿ ಕಾಣದೆ ಪುರು ನಿಷ್ಕ್ರಿಯನಾಗಿದ್ದಾನೆ. ತನ್ನ ಪೂರ್ವಜರ ಜೀವನವೇ ಅರ್ಥವಾಗದಷ್ಟು ಅವನು ದೂರನಿಂತಿದ್ದಾನೆ. ಏಕಾಕಿತನವನ್ನು ಒಪ್ಪಿಕೊಂಡಿದ್ದಾನೆ. ನೈಜವಾದ ವ್ಯಕ್ತಿತ್ವ ದೊರೆಯುವವರೆಗೆ ಯಾವ ಕರ್ಮಕ್ಕೂ ಕೈ ಹಾಕೆನೆಂದು ಅವನು ಹಟ ಹಿಡಿದಂತಿದೆ" ಎಂದು 'ಯಯಾತಿ'ಯ ಮುನ್ನುಡಿಯಲ್ಲಿ ಪ್ರೊ. ಕೀರ್ತಿನಾಥ ಕುರ್ತಕೋಟಿಯವರು ಹೇಳಿದ್ದಾರೆ.

ಅನಾಥ ಪ್ರಜ್ಞೆ ಎಂಬುದು ಆಧುನಿಕ ಪ್ರಜ್ಞೆಯ ಬಿರುಸಿನಲ್ಲಿ ನಡೆದ ದೊಡ್ಡ ಕೈಗಾರಿಕೋದ್ಯಮ, ವಾಣಿಜ್ಯ ಪೈಪೋಟಿ, ರಾಜಕೀಯ ಮೇಲಾಟದ ಪರಿಣಾಮದಿಂದ ಉಂಟಾದ ವಿನಾಶದ ಹಿನ್ನೆಲೆಯಲ್ಲಿ ಪಾಶ್ಚಾತ್ಯರಲ್ಲಿ ಮೂಡಿಬಂದ ವೈಚಾರಿಕತೆಯಾಗಿದೆ. ಮನುಷ್ಯ ಆಳದಲ್ಲಿ ಏಕಾಕಿ ಮತ್ತು ಅನಾಥ. ಮನುಷ್ಯತ್ವ ಇರುವುದು ಅದರ ಅಭಾವದಲ್ಲಿ. ಆಯ್ಕೆಯಲ್ಲಿ ಮನುಷ್ಯ ಏಕಾಕಿ. ಜೀವನ ಅಸಂಬದ್ಧತೆಯ ಮುಖಾಮುಖಿ. ಇದು ಈ ಅಸ್ತಿತ್ವವಾದಿ ವೈಚಾರಿಕತೆಯ ಹಿನ್ನೆಲೆ. ಗಿರೀಶರ ಎಲ್ಲ ನಾಟಕಗಳಲ್ಲೂ ಈ ವಿಚಾರ ಒಂದಲ್ಲ ಒಂದು ರೀತಿಯಿಂದ ತೆರೆದುಕೊಳ್ಳುತ್ತದೆ. ಇದು 'ಯಯಾತಿ'ಯಲ್ಲಿ ಸಾಕಾರವಾಗಿ ಬರುತ್ತದೆ.

ತಾವಿಬ್ಬರೂ ಕೂಡಿದೊಡನೆ ಚರ್ಚೆ ಶುರುವಾಗಿ ಬಿಡುತ್ತದೆ ಎಂದು ಹೇಳುವ ಯಯಾತಿಗೆ ಪುರು ಹೇಳುವ ಮಾತು "ವಿಷಾದವೇಕೆ ಆಗಬಾರದು ಅಪ್ಪಾ? ನಾನು ಸಾವಿರ ಸಲ ಹೇಳಿದ್ದೇನೆ. ನನಗೆ ನನ್ನ ಪೂರ್ವಜರ ದಾರಿ ತುಳಿಯುವುದು ಬೇಕಿಲ್ಲ. ನನ್ನ ದಾರಿ ಬೇರೆ."

ಪುರು ತನ್ನ ಸ್ವಂತದ ಬೇರು ಹುಡುಕುತ್ತಾನೆ. ಅವನ ತಾಯಿ ಸತ್ತು ಹೋಗಿದ್ದಾಳೆ. ಆದರೆ ಅವಳ ಪರಿಚಯ ಮತ್ತು ಅವಳ ಸಾವನ್ನು ಅವನಿಗೆ ತಿಳಿಯದ ಹಾಗೆ ಬಚ್ಚಿಡಲಾಗಿದೆ. ನಿಜವಾಗಿ ಇರುವುದೆಂದರೆ ಅವಳು ರಾಕ್ಷಸಿ. ದಿಗ್ವಿಜಯಕ್ಕೆ ಹೋದಾಗ ಕಂಡು ಮರುಳಾಗಿ ಮದುವೆಯಾದ ಹೆಣ್ಣು. ಆದರೆ ಅನಾರ್ಯಳಾದ ಅವಳು ಕೊನೆತನಕವೂ ಸಮರಸಳಾಗಲಿಲ್ಲ. ಹುಚ್ಚಿಯಂತೇ ಆಗಿದ್ದಳು. ಈ ಪ್ರತ್ಯೇಕತೆ ಪುರುವನ್ನು ಕಾಡುತ್ತಿದೆ. ಆದರೆ ಈ ವಂಶಭೇದನ ಪುರುವಿನ ಹುಡುಕಾಟಕ್ಕೆ ಕಾರಣವಾಗಿದೆ. ಈ ವೈಚಾರಿಕತೆ ಎಷ್ಟರ ಮಟ್ಟಿಗೆ ಗ್ರಾಹ್ಯ? ಇದು ಬಹುದೊಡ್ಡ ಸೈದ್ಧಾಂತಿಕ ಪ್ರಶ್ನೆ. ಗಿರೀಶರ ನಾಟಕದಲ್ಲಿ 'ಅಗ್ನಿ ಮತ್ತು ಮಳೆ'ಯವರೆಗೂ ಮುಂದುವರಿದಿದೆ. ಶರ್ಮಿಷ್ಠೆಯಲ್ಲೂ ಇದೇ ಪ್ರಶ್ನೆ ಕಾಡುತ್ತದೆ. ಅವಳು ಅಸುರೆ. ದೇವಯಾನಿ (ಬ್ರಾಹ್ಮಣ) ಆರ್ಯೆ.

ಗಿರೀಶರ ಈ ಒಡಕು ವ್ಯಕ್ತಿತ್ವ ಮನೋಭೂಮಿಕೆಯ ಚಿತ್ರಣದ ಹಿಂದೆ ಭಾರತೀಯ ವರ್ಣಧರ್ಮದ ಅಂದರೆ ಚತುರ್ವರ್ಣದ ಆ ಪ್ರತ್ಯಕ್ಷ ಪರಿಣಾಮವೂ ಇದೆಯೆಂದು ತೋರುತ್ತದೆ. ಇದು 'ಅಂಜು ಮಲ್ಲಿಗೆ'ಯಿಂದ ಹಿಡಿದು ಎಲ್ಲ ಕಡೆಗೂ ಒಂದು ತಂತ್ರವಾಗಿ ಕೂಡ ಉಪಯೋಗವಾಗಿದೆ.

ಈ ರೀತಿಯ ಸಂಘರ್ಷ 'ತಲೆ ದಂಡ'ದಲ್ಲಿ ಒಂದು ಅಪಾಯಕಾರಿ ಅಂಚನ್ನು ಮುಟ್ಟಿದೆ. ಜಗದೇವ ಬ್ರಾಹ್ಮಣ ಯುವಕ. ಹೊಸದಾಗಿ ಶರಣು ಧರ್ಮಕ್ಕೆ ಬಂದವ. ಆದರೆ ಅವನ ಪೂರ್ವಾಶ್ರಮದ ಬ್ರಾಹ್ಮಣತ್ವ ಅವನ ಇಡೀ ಕ್ರಿಯೆಯನ್ನು ನಿರ್ಬಂಧಿಸುತ್ತದೆ.

> "ಅಪ್ಪ ಜೀವದಿಂದ ಇದ್ದ ಕಾಲಕ್ಕೆ ಗಂಟಲಿನ ನರ ಹರಿಯೋ ಹಂಗೆ ನನ್ನ ಹೆಸರು ಹಿಡಿದು ಕರೆದ. ನಾ ಕಿವಿಗೊಡಲಿಲ್ಲ. ಈಗ ಕಳೆದ ಹನ್ನೊಂದು ದಿವಸದಿಂದ ನಾ ಅವನ್ನ ಕರಿಲಿಕ್ಕೆ ಹತ್ತೇನಿ. ಎರಡು ಕಲ್ಲು ತಂದು ಅವರ ಮೇಲೆ ಅಂಗ ಅಂಗವಾಗಿ ಅವನ ಪ್ರೀತಿಯನ್ನು ಆಹಾವನೆ ಮಾಡುತ್ತಿದ್ದೀನಿ. ನನ್ನದು ಯಾವಾಗಲೂ ಹಿಂಗs ಈಗೊಂದು ಆಮೇಲೆ ಅದರ ವಿರುದ್ಧ ಇನ್ನೊಂದು. ನನ್ನ ಅಪ್ಪನ ಹ್ಯಾಂಗs ಅಲ್ಲೇನು? ಅವ ಯಜ್ಞ - ಯಾಗ - ಜಪ - ತಪ - ಅಂತ ಜೀವಮಾನ ಕಳದು ಕೊನೆಯುಸಿರು ಎಳಿಯೋ ಕಾಲಕ್ಕೆ ಸಾವಿಗೆ ಹೆದರಿ ಅಳಿಸಿದ್ದ ..... ಏನು ಮಾಡಿದರೂ ಸೋಲು, ಅಂಜಿಕೆ, ವೈಫಲ್ಯ"

ಇವನ್ನೇ ಮುಂದೆ ಬಿಜ್ಜಳನ ಕೊಲೆ ಮಾಡುತ್ತಾನೆ ಮತ್ತು ತಾನೂ ಕೊಂದುಕೊಳ್ಳುತ್ತಾನೆ. ಮನುಷ್ಯರ ಕುಲದ ಪ್ರಶ್ನೆ ಒಂದು ಸ್ಥಾಯಿಯಾಗಿ ಸ್ಥಾಪಿಸಲ್ಪಡುತ್ತದೆ. ಹನ್ನೆರಡನೆ ಶತಮಾನದ ಚಳುವಳಿಯ ವಿಫಲ ಅಂಶವನ್ನು ಎತ್ತಿಕಟ್ಟುತ್ತದೆ.

'ಯಯಾತಿ'ಯಲ್ಲಿ ಗಿರೀಶರು ಮೇಲುನೋಟಕ್ಕೆ ಮೂರ್ತಿ ಭಂಜಕತ್ವವನ್ನು ಎತ್ತಿ ಹಿಡಿಯುತ್ತಾರೆಂದು ಕಂಡು ಬಂದರೂ ಅದು ಆರ್ಯ - ಅನಾರ್ಯನ ಸಂಘರ್ಷದ ಬೇರು ಹೊಂದಿರುವುದೇ ಮುಖ್ಯವಾಗುತ್ತದೆ. ಪುರುವಿನ ಒಳ ಸಂಕಟಕ್ಕೆ ಕುಲದ ವೈರ ಅಪ್ರತ್ಯಕ್ಷ ಪ್ರಜ್ಞೆಯಲ್ಲಿ ಸ್ಥಿರ ಸ್ಥಾಪನೆಗೊಂಡಿರುವುದೇ ಆಗಿದೆ. ಆದರೂ ಅಲ್ಲಿ ಪ್ರಜಾಪ್ರಭುತ್ವದಲ್ಲಿ ಮುಖ್ಯಸ್ಥಾನ ಪಡೆಯಬೇಕಾದ ಸಾಮಾನ್ಯರ ಪ್ರಭಾವಕೂಡ ಇದೆ. ತನ್ನ ಮುಪ್ಪನ್ನು ತೆಗೆದುಕೊಂಡವರಿಗೆ ತನ್ನ ಅರ್ಧ ರಾಜ್ಯವನ್ನೇ ಕೊಡುತ್ತಾನೆ ಎಂದು ಹೇಳಬೇಕಿತ್ತು ಎಂದು ಯಯಾತಿ ಹೇಳಿದಾಗ ಪುರು,

'ಆ ಪ್ರಶ್ನೆಯಲ್ಲ ಅಪ್ಪ. ಇಲ್ಲಿ ನೀತಿಯ ಪ್ರಶ್ನೆಯಿಲ್ಲ, ವಿಶ್ವಾಸದ ಪ್ರಶ್ನೆಯಿಲ್ಲ, ಧರ್ಮದ ಪ್ರಶ್ನೆಯಿಲ್ಲ. ಕೇವಲ ಅದಷ್ಟೇ ಆಗಿದ್ದರೆ ಹೇಗಾದರೂ ಉತ್ತರ ಹುಡುಕಬಹುದಿತ್ತು. ಇಲ್ಲಿ ಮನುಷ್ಯರ ಪ್ರಶ್ನೆಯಿದೆ. ಅವರಿಗೆ ತ್ಯಾಗಬೇಡ, ಕೀರ್ತಿಬೇಡ. ಜೀವನದಲ್ಲಿ ಬದಲಾವಣೆಯೊಂದಿಲ್ಲದಿದ್ದರೆ ತೀರಿತು. ಯಾರಾದರೂ ದೇವತೆಗಳಾಗಿದ್ದರೆ ನಿಮ್ಮ ಮುಪ್ಪನ್ನು ಆನಂದದಿಂದ ಸ್ವೀಕರಿಸಬಹುದಾಗಿತ್ತು. ಇವರು ಮನುಷ್ಯರು, ಒಂದೆಡೆ ಮೃತವಿಶ್ವ. ಇನ್ನೊಂದೆಡೆಗೆ ಅಜಾತಯುಗ. ಇವೆರಡರ ನಡುವಿನ ತ್ರಿಶಂಕು ನರಕ ಅವರಿಗೆ ಬೇಡ" ಎನ್ನುತ್ತಾನೆ. ಇಲ್ಲಿ ಸಾಮಾನ್ಯತೆಯ ಪ್ರಶ್ನೆ ಇದ್ದ ಹಾಗೆ ಮನುಷ್ಯರ ಇಕ್ಕಟ್ಟಿನ ಪ್ರಶ್ನೆ ಕೂಡ ಇದೆ.

ಈ ಪ್ರಜಾಪ್ರಭುತ್ವವಾದಿ ಅಂಶ 'ತುಘಲಕ್'ದಲ್ಲೂ ಕೂಡ ಇದೆ. ತರುಣನೊಬ್ಬನ ಮಾತು "ನಿಜವಾದ ಅರಸು ಮನುಷ್ಯನಾಗಿದ್ದೇ ದೊಡ್ಡವನಾಗಬೇಕು." ಎಂದಿರುವುದು ಗಮನ ಸೆಳೆಯುತ್ತದೆ.

ಈ ಅಂಶ ಇನ್ನಷ್ಟು ನಿಚ್ಚಳವಾಗುವುದು "ಹಿಟ್ಟಿನ ಹುಂಜ"ದಲ್ಲಿ ಹಿಟ್ಟಿನ ಹುಂಜದ ಆಕರ ಜನ್ನನ 'ಯಶೋಧರ ಚರಿತೆ', ಅಲ್ಲಿ ಯಶೋಧರನೇ ಮುಖ್ಯ ಪಾತ್ರ. ಆದರೆ ಹಿಟ್ಟಿನ ಹುಂಜದಲ್ಲಿ ಮಾವುತ ಬೆಳೆದು ಬಿಡುತ್ತಾನೆ.

'ಯಶೋಧರ ಚರಿತೆ'ಯಲ್ಲಿ ಕವಿಯ ಉದ್ದೇಶ ಹಿಂಸಾರಭಸ ಮತಿಯಾದ ಮಾರಿದತ್ತನ ಮನೋಪರಿವರ್ತನೆ. ಹೆಂಡತಿಯ ಹಾದರದ ಪಾಪ ಪರಿಹಾರಕ್ಕಾಗಿ ಬಲಿಕೊಡಬೇಕೆಂಬ ತಾಯಿಯ ಮಾತನ್ನು ಮೀರಲಾರದೆ, ಹಾಗೆ ಸಜೀವ ಕೋಳಿಯನ್ನು ಕೊಂದರೆ ಹಿಂಸೆಯಾಗುತ್ತದೆಂದು ಹಿಟ್ಟಿನ ಹುಂಜವನ್ನು ಬಲಿಕೊಡಲಾಗುತ್ತದೆ. ಹಾಗೆ ಬಲಿಕೊಡುವಾಗ ಅದು "ತಲೆಯಂ ಕೊಕ್ಕೊಕೋ ಕೂಗಿ ಕರೆವ ದುರಿತಂಗಳ ಬಲ್ಲುಲಿಯನೆ ಪಿಟ್ಟಿನ ಕೋಟಿಯ ತಲೆಯಂ ಪಿಡಿವಂ ತಿರಚ್ಚೆ ಪಾರಿದುದಿನಿಸಂ" ಆಗುತ್ತದೆ. ಆದರೆ ನಾಟಕದಲ್ಲಿ 'ಹಿಟ್ಟಿನ ಹುಂಜ' ಮೂಲ ಪ್ರವೃತ್ತಿಗಳಲ್ಲಿ ಪ್ರಬಲವಾದ 'ಕಾಮ'ಕ್ಕೆ ಸಂಕೇತವಾಗುತ್ತದೆ. ಅದರ ನಿರಂತರತೆ, ಪ್ರಾಬಲ್ಯವನ್ನು ಧ್ವನಿಸುತ್ತದೆ.

ಈ ಕಾಮ ಪ್ರವೃತ್ತಿಯ ನಿರಂತರತೆಯ ಶಕ್ತಿ ಮತ್ತು ಜೀವಶಕ್ತಿಯಾಗಿ ಅರಳುವ ಶುದ್ಧತೆಯನ್ನು ಅಂದರೆ ಅದು ಶುದ್ಧವೇ - ಬದುಕಿನ ಅನಿವಾರ್ಯತೆಯೇ ಶುದ್ಧ. ಅದು ವ್ಯವಸ್ಥೆಯನ್ನು ಮೀರಿದ್ದು. ಅಗ್ನಿದಿವ್ಯವನ್ನು ಹಿಡಿದದ್ದು ಎಂಬುದನ್ನು 'ನಾಗಮಂಡಲ' ಇನ್ನಷ್ಟು ಪ್ರಕಾಶಕ್ಕೆ ತರುತ್ತದೆ. ಅಲ್ಲಿ ಕೂಡ ಮನುಷ್ಯ ಒಳ ಪ್ರಪಂಚದ ಅಸಂಬದ್ಧತೆಯ ದರ್ಶನವಿದೆ ಮತ್ತು ವ್ಯಕ್ತಿತ್ವ ಒಡಕಿನ ದೃಷ್ಟಿಕೋನ ಕೂಡ ಇದೆ.

'ತುಘಲಕ್' ಈ ಅಸಂಬದ್ಧತೆಯ ಉಜ್ವಲ ಪ್ರತಿಮೆಯಾಗಿದೆ. ತುಘಲಕ್ ಅಸಂಗತೆಯ ಹಾಗೆಯೇ ಅದರಿಂದುಂಟಾದ ದ್ವಂದ್ವ ವ್ಯಕ್ತಿತ್ವದ ದುರ್ಬಲ ವ್ಯಕ್ತಿ. ಇಲ್ಲಿ 'ನವ್ಯ' ವ್ಯಕ್ತಿತ್ವ ತಾಕಲಾಟವಿದೆ. ದರ್ಶನವಿದೆ. 'ಅದು ನೆಹರೂ ಕಾಲದ ರಾಜಕೀಯ' ಎಂದು ಕೆಲವರು ಎಷ್ಟೇ ಸಮರ್ಥನೆ ಮಾಡಿಕೊಂಡರೂ ಅದು ಆಂಶಿಕವಾಗಿದೆ. ಹಾಗೆ ನೋಡಿದರೆ ನಾನು ಮೊದಲೇ ಹೇಳಿದಂತೆ ಗಿರೀಶರು ಹೆಚ್ಚಿನ ಕೃತಿಗಳಲ್ಲಿ ಆ ಕಾಲದ ರಾಜಕೀಯಕ್ಕೆ ಸ್ಪಂದಿಯೇ ಇದ್ದಾರೆ. ಸಮಕಾಲೀನಕ್ಕೆ ಸ್ಪಂದಿಸುತ್ತಲೇ ತಮ್ಮ 'ನವ್ಯ'ವನ್ನು ಶಾಂತಿನಾಥ ದೇಸಾಯಿ ಕೊನೆತನಕ ಕಾಪಾಡಿಕೊಂಡಿದ್ದರು. ಇದು ಇಲ್ಲಿ ಸಂಪೂರ್ಣವೆಂದಲ್ಲದಿದ್ದರೂ ಬಹುಮಟ್ಟಿಗೆ ಹಾಗೇ ಇದೆ.

> "ನನಗೆ ರಾಜ್ಯದಲ್ಲಿ ಸುಮತೆ ಬೇಕು. ಪ್ರಗತಿಬೇಕು. ತರ್ಕ ಶುದ್ಧ ನ್ಯಾಯಬೇಕು. ಶಾಂತಿಯಿದ್ದರೆ ಸಾಕಾಗಲಿಲ್ಲ. ಜೀವಕಳೆಬೇಕು. ಈ ಪ್ರಗತಿಪರ ರಾಜ್ಯವನ್ನು ಸಾಧ್ಯಗೊಳಿಸುವ ಮಾರ್ಗದಲ್ಲಿ ನಾನೊಂದು ಹೊಸ ಹೆಜ್ಜೆಯನ್ನಿಡುವವನಿದ್ದೇನೆ."

ಎನ್ನುವ ತುಘಲಕನ ಸೀಳು - ಅಸಮಗ್ರ - ವ್ಯಕ್ತಿತ್ವದ ಒಂದು ಭಾಗಕ್ಕೆ ಸಂಬಂಧಿಸಿದ್ದಾಗುತ್ತದೆ. "ಓದಬೇಕು, ಓದಬೇಕು, ಓದಬೇಕು, ಎಂಬ ಆಸೆಯುಂಟಾಗುತ್ತದೆ. ಇನ್ನೊಮ್ಮೆ ಎತ್ತರದ ಮರವೊಂದರ ತುದಿಗೆ ಏರಬೇಕು. ನನ್ನ ಪ್ರಜೆಗಳೆಲ್ಲರ ಎಚ್ಚರಿಸುವಂತೆ ಕೂಗಬೇಕು ಎನ್ನಿಸುತ್ತದೆ" ಎನ್ನುವುದು ಅವನ ಆಲೋಚನೆಯ ಆದರ್ಶದ ಒತ್ತಡವಾಗಿದೆ. ಆದರೆ ಆತ ಇದಕ್ಕೆ ಆಯ್ದುಕೊಂಡ ಮಾರ್ಗ ಹಿಂಸೆ. ಆತ ತನ್ನ ತಂದೆಯನ್ನೇ ಕೊಂದು ಅಧಿಕಾರಕ್ಕೆ ಬಂದಿದ್ದಾನೆ. ಅವಳ ಮಲತಾಯಿ ಹೇಳುತ್ತಾಳೆ:

> "ಒಂದು ಕಾಲದಲ್ಲಿ ರಾಜ್ಯದಲ್ಲಿ ಶಾಂತಿ ಸ್ಥೈರ್ಯಗಳನ್ನು ತರಬೇಕೆಂಬ ಹುರುಪು ನಿನ್ನಲ್ಲಿತ್ತು. ಪ್ರಗತಿಯ ಆಸೆಯಿತ್ತು. ಆದರೆ ಪಟ್ಟವೇರಿದ ಏಳೇ ವರ್ಷಗಳಲ್ಲಿ ನಿನ್ನ ಪರಿಸ್ಥಿತಿ! ನಿನ್ನ ತಂದೆ, ತಮ್ಮ, ಶೇಖ ಇಮಾಮುದ್ದೀನ್ ಅವರ ನಂತರದ ಜನ - ನಿನ್ನ ರಾಜ್ಯವೆಂದರೆ ಮರಣದ ಬಚ್ಚಲು ಮನೆಯಾಗಿದೆ."
>
> "ನನ್ನ ಹಿಂಸೆಯ ಬೇರು ನಗ್ನ ತಲೆಯಲ್ಲಿಲ್ಲ ತಾಯಿ. ನನ್ನ ಧಮನಿಯಲ್ಲಿದೆ. ನನಗೆ ಹಿಂಸೆಬೇಕು. ನಾನು ಯಾರು ಎಂದು ಗೊತ್ತಾಗಲಿಕ್ಕೇಬೇಕು" (ತುಘಲಕ್)

'ತುಘಲಕ್'ಗೆ ಮೂಲ ಮಾದರಿ ಕಾಮುವಿನ 'ಕ್ಯಾಲಿಗುರಿ' ಎಂದು ಉಮೇಶ ಹೇಳುತ್ತಾರೆ. (ಸಂಕ್ರಮಣ ೬೧/೬೨/೧೯೭೭)

"ಅಗ್ನಿ ಮತ್ತು ಮಳೆ" ಕೃತಿಯ ಕಥಾ ಹಂದರ ಪೌರಾಣಿಕವಾದುದು. ಇಲ್ಲಿಯೂ ಗಿರೀಶರ ಅನ್ವೇಷಣೆಯ ತಂತ್ರ ಸಮುದಾಯದ ಒಡಕಿನದಾಗಿದೆ. ಈ ಒಡಕು ಒಂದು ಹೊಸ ಆಯಾಮವನ್ನು ಪಡೆದುಕೊಳ್ಳುತ್ತದೆ. ಆದರೂ ವಂಶಭೇದನ, ಕುಲಮೂಲ ಹಾಗೆಯೇ ವರ್ಣಾಶ್ರಮದಿಂದುಂಟಾದ ಸಮೂಹದ ಬಿರುಕು, ಒಡಕು ಇಲ್ಲಿಯ ನೆಯ್ಗೆಯ ತಂತುವಾಗಿದೆ. ಆದರೆ ಈ ದ್ವಂದ್ವ ಒಂದುಸಲ ಒಂದೇ ವ್ಯಕ್ತಿಯ ಒಳಗೆ ಆಗಿ ಇನ್ನೊಮ್ಮೆ ಸಮಸ್ಯೆಯ ಮೂರ್ತಿರೂಪೀ ಸಂಕೇತವಾಗಿ (ನಾಗಮಂಡಲ, ಅಂಜುಮಲ್ಲಿಗೆ) ಮತ್ತೊಮ್ಮೆ ಕುಲಭೇದವಾಗಿ, ಜನಾಂಗೀಯ ಬಿರುಕಾಗಿ ಪುನರಾವರ್ತನೆ ಹೊಂದುತ್ತಲೇ ಇದೆ. ಆದ್ದರಿಂದಲೇ ಈ ದ್ವಂದ್ವ ವ್ಯಕ್ತಿಯ ನೆಲೆಯಿಂದ ತಂತ್ರದ ತನಕವೂ ಒಂದು ಪಡಿಯಚ್ಚಾಗಿ ಬರುತ್ತದೆ.

'ಅಗ್ನಿ ಮತ್ತು ಮಳೆ'ಯಲ್ಲಿ ಈ ದ್ವಂದ್ವ ಆರ್ಯ - ಅನಾರ್ಯ (ಬ್ರಾಹ್ಮಣ - ಶೂದ್ರ) ನೆಲೆಯಲ್ಲಿ ಕಾಣಿಸಿಕೊಂಡಿದೆ. ಅಂದರೆ ನಾಟಕಕಾರರು ಸಮಗ್ರವಾಗಿ ವ್ಯಕ್ತಿತ್ವವನ್ನು ಗ್ರಹಿಸುತ್ತಿಲ್ಲವೇ? ಇನ್ನು ಖಚಿತವಾಗಿ ಹೇಳುವುದಾದರೆ 'ನವ್ಯ'ದ ಮೂಲಭೂತವಾದ ಒಡಕು ಮತ್ತು ಅನಾಥತನವನ್ನು ಶಾಶ್ವತವಾಗಿ ಅಪರಿವರ್ತನೀಯವಾಗಿ ಗ್ರಹಿಸುತ್ತಾರೆಯೇ ಎಂಬುದಾಗಿದೆ.

ಹಾಗಿದ್ದಾಗಲೂ 'ಅಗ್ನಿ ಮತ್ತು ಮಳೆ'ಯಲ್ಲಿ ವೈದಿಕ ಪುರಾಣವನ್ನು ಧ್ವಂಸ ಮಾಡುತ್ತಾರೆ. ವೈದಿಕದ ಡೊಂಗಿಯನ್ನು ಬಯಲಿಗೆಳೆಯುತ್ತ ಅದರ ಋಕ್ಷತೆಯನ್ನು ಢಾಳಾಗಿ ಎದುರು ಹಿಡಿಯುತ್ತಾರೆ. ಕೊನೆಗೂ ಕ್ಷಾಮದಿಂದ ಬೆಂದು ಹೋದ ಭೂಮಿಗೆ ಮಳೆ ಬರುವುದು ಏಳು ವರ್ಷದಿಂದ ನಡೆಯುವ ಯಜ್ಞದಿಂದಲ್ಲ. ಬದಲಾಗಿ ನಿಷಾದ ಕನ್ಯೆಯ ಸ್ನೇಹ ಹೊಂದಿದ ಬುದ್ಧಿವಂತನಲ್ಲದ ಅರವಸುವಿನಿಂದ. ಅವನ ಮುಗ್ಧ ಆದರೆ ಸಹಜವಾದ ವರ್ತನೆಯಿಂದ. ಸಂತೋಷದಿಂದ ಜನರೇನೋ ಕುಣಿಯುತ್ತಾರೆ. ಆದರೆ ಸಂಗಾತಿ ವಿಹೀನ ಅರವಿಸು ವಿಷಾದಪೂರ್ಣ.

# ಕರ್ನಾಟಕ ಸಂಸ್ಕೃತಿ ಬಿಂಬಿಸುವ ಸಮಗ್ರ ವ್ಯಕ್ತಿಚಿತ್ರಗಳು

- ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್

ಕನ್ನಡದಲ್ಲಿ ವ್ಯಕ್ತಿ ಚಿತ್ರ ಪರಂಪರೆಗೆ ಸಾಕಷ್ಟು ದೀರ್ಘತೆ ಉಂಟು. ಡಿ.ವಿ.ಜಿ. ಅವರ 'ಜ್ಞಾಪಕ ಚಿತ್ರಶಾಲೆ'ಯ ವ್ಯಕ್ತಿ ಚಿತ್ರಗಳು ಈ ಹೊತ್ತಿಗೂ ನೆನಪಿಗೆ ಬರುತ್ತವೆ. ವಿ.ಸೀ. ಅವರು 'ಹಿರಿಯರು ಗೆಳೆಯರು', ಕಾರಂತರ ಆತ್ಮಕಥನದಲ್ಲಿ ಹುದುಗಿರುವ ವ್ಯಕ್ತಿ ಚಿತ್ರಗಳು ಪರ್ಯಾಯವಾಗಿ ನೆರವಾಗುತ್ತವೆ. ನಮ್ಮ ಸಮಾಜಕ್ಕೆ ಹಲವು ಮುಖಗಳುಂಟು. ಆ ಎಲ್ಲ ಮುಖಗಳು ಸಮಾಜ ಹಾಗೂ ಸಂಸ್ಕೃತಿಯ ಅಂತರಂಗಕ್ಕೆ ಬೆಳಗನ್ನು ನೀಡಬಲ್ಲವು. ಒಂದು ಸಮಾಜದ ಘಟಕಕ್ಕೆ ಸಾಹಿತಿಗಳು ಮಾತ್ರವಲ್ಲ, ಒಬ್ಬ ಎಂಜಿನಿಯರ್, ಒಬ್ಬ ರೈತ, ಒಬ್ಬ ಸಮಾಜ ಶಾಸ್ತ್ರಜ್ಞ, ಒಬ್ಬ ಕಲಾವಿದ, ಒಬ್ಬ ಸಂಸ್ಕೃತಿ ನಿಷ್ಠ ರಾಜಕಾರಣಿ, ಒಬ್ಬ ಚಿಂತಕ, ಒಬ್ಬ ವೈದ್ಯ, ಒಬ್ಬ ಶಿಕ್ಷಕ - ಇಂಥವರೂ ಅಗತ್ಯ. ಅವರ ವ್ಯಕ್ತಿತ್ವ ರೂಪಣವೂ ಸಮಾಜ ಘಟಕಕ್ಕೆ ಹಿತವಾದ ಗಾಳಿ - ಬೆಳಕನ್ನು ನೀಡಬಲ್ಲುದು. ಡಿ.ವಿ.ಜಿ. ಮತ್ತು ಶಿವರಾಮಕಾರಂತರ ಬರಹಗಳಲ್ಲಿ ಈ ಬಗೆಯ 'ಸಮಗ್ರ ವ್ಯಕ್ತಿತ್ವ'ದ ಬರಹಗಳು ಅಡಗಿ ಕೂತಿವೆ.

ಹರಿಹರಪ್ರಿಯ, ಡಿ.ವಿ.ಜಿ, ಮಾಸ್ತಿ ಮತ್ತು ಕಾರಂತರ ವ್ಯಕ್ತಿತ್ವ ಪರಂಪರೆಗೆ ಸೇರಿದವರು. ಡಿ.ವಿ.ಜಿ. ಅವರು ಬರೆದ ಬರಹಗಳ ಜತೆಗಿಟ್ಟು ನೋಡಿದರೆ ಈ ಅಂಶ ತುಸು ಎದ್ದು ಕಾಣುತ್ತದೆ. ಈ ಸಂಗತಿಯನ್ನು ಇನ್ನೊಂದು ರೀತಿಯಿಂದ ವಿವರಿಸಬಹುದು. ಹರಿಹರಪ್ರಿಯ ವ್ಯಕ್ತಿಗಳ ಅಂತರಂಗಕ್ಕೆ ಇಳಿದು ನೋಡಬಲ್ಲವರು. ಆ ವ್ಯಕ್ತಿತ್ವಕ್ಕೆ ಇರುವ ದೋಷ ಮುಖಗಳನ್ನೂ, ಗುಣ ಮುಖಗಳನ್ನೂ ಎತ್ತಿ ಹೇಳಬಲ್ಲರು. ನನಗೆ ತಿಳಿದಂತೆ ಅವರ ವ್ಯಕ್ತಿ ಚಿತ್ರಗಳಲ್ಲಿ ಈ ಎರಡೂ ಬಗೆಯ ಗುಣ ದೋಷಗಳ ಮುಖಗಳಿರುವುದರಿಂದ ಡಿ.ವಿ.ಜಿ, ಮಾಸ್ತಿ ಮತ್ತು ಕಾರಂತರಿಗಿಂತ




**ಸಮಗ್ರ ವ್ಯಕ್ತಿಚಿತ್ರಗಳು**

*(ಸಂಪುಟ - ೧) ಲೇ : ಹರಿಹರಪ್ರಿಯ,*

*ಪ್ರ : ಇಳಾ ಪ್ರಕಾಶನ, ಚಾಮರಾಜಪೇಟೆ, ಬೆಂಗಳೂರು.*

*ಪುಟಗಳು : xxiv + ೨೭೬, ಬೆಲೆ: ೨೦೦/- ೧೯೯೮*

ಇವರು ಬೇರೆಯಾಗುತ್ತಾರೆ; ಇವರ ಬರಹ ಅವರಿಗಿಂತ ಬೇರೆಯಾಗುತ್ತದೆ. ಈ ಅಂಶಕ್ಕೆ ಸಾಂಸ್ಕೃತಿಕ ವ್ಯಕ್ತಿಗಳಾದ ಗಾಂಧಿ ಮತ್ತು ಬಸವಣ್ಣನಂತಹವರ ಬಗೆಗಿನ ಬರಹವನ್ನು ನೋಡಬಹುದು. ಬಸವಣ್ಣ ಕನಕದಾಸ, ಗಾಂಧಿ ವ್ಯಕ್ತಿಚಿತ್ರ ಬರೆದಿರುವ ಹರಿಹರಪ್ರಿಯ ಅಂಬೇಡ್ಕರ್ ವ್ಯಕ್ತಿಚಿತ್ರ ಏಕೆ ಬರೆದಿಲ್ಲವೆಂಬುದು ಕುತೂಹಲಕರ ಅಂಶ. ದಲಿತ - ಬಂಡಾಯಗಳ ತಾತ್ವಿಕ ಚರ್ಚೆಗಳ ನಡುವೆ ಹರಿಹರಪ್ರಿಯ ನಿಂತಿದ್ದಾರೆ. ಅಂಬೇಡ್ಕರ್ ಅವರನ್ನು ಕಾಡಬೇಕಿತ್ತು; ಕಾಡದೆ ಇರುವುದರ ಬಗೆಗೂ ವ್ಯಕ್ತಿಚಿತ್ರ ಬರೆಯದಿರುವುದರ ಬಗೆಗೂ ನಮ್ಮಲ್ಲಿ ಕುತೂಹಲವಿದೆ.

ಹರಿಹರಪ್ರಿಯ ಈ ಬಗೆಯ ವ್ಯಕ್ತಿ ಚಿತ್ರಗಳನ್ನು ಮೂರು ಬಗೆಯ ನೆಲೆಗಳಿಂದ ಆಕರಿಸುತ್ತಾರೆ. ಮೊದಲನೆಯದು ನೇರವಾಗಿ ಕಂಡ ಅನುಭವಗಳ ಆಕರಣೆ. ಎರಡನೆಯದು ಗೆಳೆಯರಿಂದ ಅನ್ಯರಿಂದ ಪಡೆದ, ಕೇಳಿದ ಆಕರಣೆ, ಮೂರನೆಯದು ಪುಸ್ತಕಗಳು - ಲೇಖನಗಳು ಪತ್ರಗಳ ಮುಖಾಂತರ ಸಜ್ಜುಗೊಂಡ ಆಕರಣೆ. ಈ ಬಗೆಯ ಸಿದ್ಧತೆ ಒಬ್ಬ ಸಂಶೋಧಕನಿಗೂ ವಿಮರ್ಶಕನಿಗೂ ಇರಬೇಕು. ಹರಿಹರಪ್ರಿಯ ಹಲವು ಕಡೆ ಸಂಶೋಧಕರೂ ಹೌದು. ಸಂಸ್ಕೃತಿ ವಿಮರ್ಶಕರೂ ಹೌದು. ಪ್ರತಿಯೊಂದು ಮಾತು, ಪದ, ವಿವರಣೆ, ಚರ್ಚೆ, ಜಿಜ್ಞಾಸೆಗಳನ್ನು ಒಬ್ಬ ಸಂಶೋಧಕನಂತೆ, ವಿಮರ್ಶಕನಂತೆ ಗಮನಿಸಿದ್ದಾರೆ; ಕಂಡರಿಸಿದ್ದಾರೆ. ಈ ಗುಣಗಳು ನಮ್ಮ ಬಹುಪಾಲು ಲೇಖಕರಲ್ಲಿ ಕಡಿಮೆಯೆಂದು ಒಪ್ಪಬೇಕು.

ಹರಿಹರಪ್ರಿಯ ಬರೆದಿರುವ 'ಸಮಗ್ರ ವ್ಯಕ್ತಿ ಚಿತ್ರಗಳು' ಗ್ರಂಥದಲ್ಲಿ ಐದು ಭಾಗಗಳಿವೆ. ಒಟ್ಟು ಐವತ್ತೆರಡು ವ್ಯಕ್ತಿ ಚಿತ್ರಗಳನ್ನು ರೂಪಣಗೊಳಿಸಿದ್ದಾರೆ. ಇವು ಮೂವತ್ತು ವರ್ಷಗಳ ಅವಧಿಯ (೧೯೬೮ - ೧೯೯೮) ವಿಭಿನ್ನ ವ್ಯಕ್ತಿ ಚಿತ್ರಗಳಾಗಿವೆ. ನಾನು ಇಲ್ಲಿ ಬೇಕೆಂದೇ 'ವಿಭಿನ್ನ ಎನ್ನುವ ಮಾತನ್ನು ಬಳಸಿದ್ದೇನೆ. ಈ 'ವಿಭಿನ್ನ' ಎಂಬ ಮಾತು ಹರಿಹರಪ್ರಿಯ ಅವರ ವ್ಯಕ್ತಿಚಿತ್ರಣಕ್ಕೆ ಅನ್ವಯಗೊಂಡಂತೆ, ಸಾಂಸ್ಕೃತಿಕ ವಿದ್ಯಮಾನದ ವಿವಿಧ ಕಾಲಘಟ್ಟಗಳಿಗೆ ಸೇರಿದ ವಿಭಿನ್ನ ವ್ಯಕ್ತಿಗಳ ವ್ಯಕ್ತಿಚಿತ್ರಗಳೂ ಆಗಿವೆ. ಈ ಬರಹಗಳಲ್ಲಿ ತಿವಿತ ಉಂಟು, ಜಿಜ್ಞಾಸೆ ಉಂಟು, ಅಂತರಂಗದ ಒಳನೆಲೆಗಳುಂಟು, ಫಳಕ್ಕನೆ ಮಿಂಚುವ ಓರೆನೋಟವುಂಟು. ಇವೆಲ್ಲವೂ 'ವಿಭಿನ್ನ' ಬಗೆಗಳಾಗಿಯೇ ಕಂಪೋಜ್ ಗೊಳ್ಳುತ್ತವೆ. ಈ ವ್ಯಕ್ತಿ ಚಿತ್ರಗಳು ಮಾಹಿತಿ ರೂಪದ ವ್ಯಕ್ತಿ ಚಿತ್ರಗಳಲ್ಲ; ಅಥವಾ ಹೊಗಳಿಕೆಯ ಬೆನ್ನೇರುವ ವ್ಯಕ್ತಿ ಚಿತ್ರಗಳೂ ಅಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ಸಮಾಜದ ವಿವಿಧ ಘಟಕಗಳಲ್ಲಿ ವ್ಯಕ್ತಿತ್ವ ಹಾಗೂ 'ವ್ಯಕ್ತಿಮತ್ವ' ಪಡೆದ ನೆಲೆಗಳನ್ನು ಹುಡುಕುವ ಆಶಯಗಳನ್ನು ಹೊತ್ತಿವೆ. ಅವರು ಜೋಡಿಸಿರುವ ಕ್ರಮವೂ ನನ್ನ ಮೇಲಿನ ಮಾತನ್ನು ರುಜುವಾತುಗೊಳಿಸುತ್ತವೆ.

'ಸಮಗ್ರ ವ್ಯಕ್ತಿ ಚಿತ್ರಗಳು' ಐದು ಭಾಗಗಳನ್ನು ಒಳಗೊಂಡಿದ್ದು ಸರಿಯಷ್ಟೆ. ಮೊದಲನೆಯ ಭಾಗವು ಮೂವತ್ತೆರಡು ವ್ಯಕ್ತಿ ಚಿತ್ರಗಳನ್ನು ಒಳಗೊಂಡಿದ್ದು ಈ ಚಿತ್ರಣವು ಬಸವಣ್ಣನಿಂದ ಆರಂಭ ಆಗುತ್ತದೆ. ಇದು ಹರಿಹರಪ್ರಿಯರ ಕಮಿಟ್‌ಮೆಂಟನ್ನು ಸೂಚಿಸುತ್ತದೆ. ಸಾಮಾಜಿಕ ಚಳವಳಿಯ ಮೊದಲ ನೇತಾರ ಕನ್ನಡದ ಮಟ್ಟಿಗಂತೂ ಅವನೇ. ಬಸವಣ್ಣನ ವ್ಯಕ್ತಿತ್ವ, ಕನಕದಾಸ ಮತ್ತು ಗಾಂಧೀಜಿಯ ವ್ಯಕ್ತಿತ್ವ ಹಿಮ್ಮೇಳ ಆಗಿರುವುದು ಸೂಕ್ತವೇ ಆಗಿದೆ. ನಮ್ಮ ನಡುವೆ ಸಮಕಾಲೀನವಾಗಿ ಬದುಕಿರುವವರ ಚಿತ್ರಗಳು ಇದ್ದಂತೆ, ಹೆಸರನ್ನು ಕೇಳಿದ ವ್ಯಕ್ತಿ ಚಿತ್ರಗಳೂ

ಉಂಟು. ಈಗಿನ ಪೀಳಿಗೆಯವರಿಗೆ ಬೆಂಗಳೂರು ಪುಟ್ಟಯ್ಯ, ಕೃಷ್ಣಕುಮಾರ ಕಲ್ಲೂರು, ಬಿ.ಎಸ್. ಪಾಂಡುರಂಗರಾವ್ ಗೊತ್ತೇ ಇಲ್ಲ. ವಿದ್ವತ್ ಪುರುಷರಾದ ಎಂ. ಗೋವಿಂದ ಪೈ, ರಂ.ಶ್ರೀ. ಮುಗಳಿ, ಎತರ್ೂರು ಶಾಂತಿರಾಜಶಾಸ್ತ್ರೀ, ವಿ. ಸೀತಾರಾಮಯ್ಯ ಇರುವಂತೆ, ಕಾದಂಬರಿಕಾರರಾದ ಬಿ. ಪುಟ್ಟಸ್ವಾಮಯ್ಯ, ಕೃಷ್ಣಮೂರ್ತಿ ಪುರಾಣಿಕ, ವಿ.ಎಂ ಇನಾಂದಾರ, ಶಂಕರ ಮೊಕಾಶಿ ಪುಣೇಕರ ಇವರೂ ಇದ್ದಾರೆ. ಎಂ. ಗೋಪಾಲಕೃಷ್ಣ ಅಡಿಗ, ರಾಮಚಂದ್ರಶರ್ಮ, ಚೆನ್ನವೀರ ಕಣವಿಯವರಂಥ ಕವಿಗೂ ಇಲ್ಲಿದ್ದಾರೆ. ಇವರ ವ್ಯಕ್ತಿಚಿತ್ರಗಳು ಅವರವರ ವಿಶಿಷ್ಟ "ಬಗೆ"ಗಳನ್ನು ಹಲವು ತೆರದಲ್ಲಿ ಅನಾವರಣಗೊಳಿಸಿದ್ದಾರೆ. ಈ ಭಾಗವು ಸಾಹಿತ್ಯ ವ್ಯಕ್ತಿತ್ವಗಳಿಂದ ರೂಪಣಗೊಂಡಿವೆ. ಪ್ರತಿಯೊಂದು ವ್ಯಕ್ತಿತ್ವವು ಕುತೂಹಲವೂ ವಿಶ್ಲೇಷಣಾತ್ಮಕವೂ ಶೋಧನಾತ್ಮಕವೂ ಆದ ನೆಲೆಗಳಿಂದ ಕೂಡಿದೆ. ಹರಿಹರಪ್ರಿಯರ ಈ ಬರಹಗಳು ವಿಶಿಷ್ಟವೂ ವಿಭಿನ್ನವೂ ಆಗಿರುವುದು ಇಂಥ ಕಡೆಗಳಲ್ಲೇ. ಅವರು ಇಲ್ಲಿ ಕಂಡರಿಸಿರುವುದು ಉತ್ಪ್ರೇಕ್ಷಿತ, ರಂಜಿತ, ಸುಳ್ಳು ಹೇಳಿಕೆಗಳ ಬಂದಳಿಕೆಯ ಚಿತ್ರಗಳಲ್ಲ; ಜೀವನದ ಕುಲುಮೆಯಲ್ಲಿ ಬೆಂದು ಪುಟಗೊಂಡ ವ್ಯಕ್ತಿ ಚಿತ್ರಗಳೇ ಆಗಿವೆ. ಇವು ನಮ್ಮ ಕಣ್ಣ ಮುಂದೆ ಊರುತ್ತವೆ. ಬಸವಣ್ಣ, ಕನಕದಾಸ, ಗಾಂಧೀ ಕಾಲದ ನೆಲೆಯಿಂದ ದೂರವಾಗಿದ್ದರೂ 'ಕೃತಿ' ನೆಲೆಯಿಂದ ಹತ್ತಿರದವರೇ. ಉಳಿದ ಹಿರಿಯ ಸಮಕಾಲೀನರು ಬರಹಗಳಿಂದ, ಕೇಳಿಕೆಗಳಿಂದ, ಘಟನೆಗಳಿಂದ ನಮಗೆ ಹತ್ತಿರದವರೇ. ಹರಿಹರಪ್ರಿಯ ಹಿರಿಯ ಸಮಕಾಲೀನರ ಜತೆ ಒಡನಾಡಿದವರು. ಅವರ ಎಲ್ಲ ಬಗೆಯ ಮುಖಗಳನ್ನು ಕಂಡವರು. ಇಲ್ಲಿ ಸಮಕಾಲೀನರೋ ಕಿರಿಯ ಸಮಕಾಲೀನರೋ ಆದವರ ಬರಹವಿಲ್ಲ. ಹರಿಹರಪ್ರಿಯ ತನಗೆ ಸಾಂಸ್ಕೃತಿಕವಾಗಿ ಸಾಹಿತ್ಯಕವಾಗಿ ಇಷ್ಟರಾದವರ ಬರಹಗಳನ್ನು 'ಕೃತಿಗೊಳಿಸಿ'ದ್ದಾರೆ.

ಎರಡನೆಯ ಭಾಗವು ಆರು ಸ್ತ್ರೀ ವ್ಯಕ್ತಿತ್ವಗಳನ್ನು ಒಳಗೊಂಡಿದೆ. ಇವರೆಲ್ಲರೂ ಸಿದ್ಧ - ಪ್ರಸಿದ್ಧರಲ್ಲ. ಆದರೆ, ಗಮಕಿಯಾಗಿ ನಾಡೇ ರೋಮಾಂಚನಗೊಳ್ಳುವಂತೆ ಹಾಡಿದ ಶಕುಂತಲಾ ಬಾಯಿ ಇದ್ದಾರೆ; ಪುತ್ತೂರಿನ ಹರಿಕಥೆ ಮಾಡುತ್ತಿದ್ದ ಪದ್ಮಾವತೀ ಬಾಯಿ ಇದ್ದಾರೆ; ಸದ್ದಿಲ್ಲದೆ ಸಾಹಿತ್ಯ ಕೃಷಿ ಮಾಡಿದ ಶಾಂತಾದೇವಿ ಕಣವಿ ಇದ್ದಾರೆ; ವೈದ್ಯ ಸಾಹಿತಿ ಅನುಪಮಾ ನಿರಂಜನ - ಉತ್ತಮ ಶಿಕ್ಷಕಿ ಚಿತ್ರಾ ಕೃಷ್ಣಮೂರ್ತಿ ಹಾಗೂ ನಟಿ ಜಯಮಾಲಾ ಇದ್ದಾರೆ. ಈ ಬರಹಗಳನ್ನು ನೋಡಿದರೆ ಯಾವುದೋ ಒಂದು ಮೂಲೆಯಲ್ಲಿ ಅಥವಾ ಅಡಿಗೆ ಮನೆಯ ಕತ್ತಲಲ್ಲಿ ಜೀವ ಕಾಣಬೇಕಾದವರು ಒಂದೊಂದು ಕ್ಷೇತ್ರವನ್ನು ಹುಡುಕಿ ನಡೆಸಿದ, ಸಾಧಿಸಿದ ಹಂತ ಹಂತದ ಚಿತ್ರಗಳು ಕಣ್ಣ ಮುಂದೆ ಬಂದು ನಿಲ್ಲುತ್ತವೆ. ಮೂರನೆಯ ಭಾಗವು ಸಂಗೀತ ಹಾಗೂ ನಾಟ್ಯ ಕಲೆಗಳಾಗಿ ತಮ್ಮನ್ನು ಅರ್ಪಿಸಿಕೊಂಡ ರಾಳ್ಲಪಲ್ಲಿ ಅನಂತಕೃಷ್ಣ ಶರ್ಮ, ಪುಟ್ಟರಾಜ ಗವಾಯಿ, ವಿ.ಎಸ್. ಕೌಶಿಕ್, ರೆಕಾರ್ಡ್ ರಂಗರಾವ್, ಟಿ.ಎ.ಎಸ್. ಮಣಿ ಇದ್ದಾರೆ. ಈ ಪ್ರತಿಯೊಬ್ಬರ ಅಪ್ರತಿಮ ಸಾಧನೆಗಳು ಬರಹದಲ್ಲಿ ರೂಪುಗೊಂಡಿವೆ. ವಿ.ಎಸ್. ಕೌಶಿಕ್ ಅವರ ಬಗೆಗೆ ಬರೆದ ಬರಹ ಮೇಲು ಮಟ್ಟದ್ದಾಗಿದೆ. ಅವರ ವ್ಯಕ್ತಿತ್ವದ ಅಖಂಡತೆಯು ನಿರಾಳವಾಗಿ ರೂಪುಗೊಂಡಿದೆ. ನಾಲ್ಕನೆಯ ಭಾಗವು ದೃಶ್ಯ ಕಲೆಗಾಗಿ ಅರ್ಪಿಸಿಕೊಂಡ ಕಲಾವಿದರ ಬರಹಗಳನ್ನು ಒಳಗೊಂಡಿದೆ. ಅ.ನ.ಸು,

ಕೆ.ಕೆ. ಹೆಬ್ಬಾರ, ರುಮಾಲೆ ಮತ್ತು ತಿಪ್ಪೇಸ್ವಾಮಿ ಅವರ ಕಲಾವ್ಯಕ್ತಿತ್ವ ಇಲ್ಲಿದೆ. ನನಗೆ ಆಶ್ಚರ್ಯ ಆದದ್ದು ಹಡಪದ್‌ರಂಥ 'ವಿಭಿನ್ನ' ಬಗೆಯ ಕಲಾವಿದರ ವ್ಯಕ್ತಿ ಚಿತ್ರ ಇಲ್ಲದೆ ಇರುವುದು. ಬೆಂಗಳೂರಿನ ಕಲಾ ಸಾಂಸ್ಕೃತಿಕ ರಂಗಕ್ಕೆ ಅಪೂರ್ವ ಚಾಲನೆಗೊಂಡ ಹಡಪದ್ ಅವರ ಬರಹ ಇದ್ದಿದ್ದರೆ ಈ ಭಾಗಕ್ಕೆ ಒಂದು ಸ್ವಯಂಪೂರ್ಣತೆ ದೊರೆಯುತ್ತಿತ್ತು. ಆದರೆ, ಅ.ನ. ಸುಬ್ಬರಾವ್ ಬೆಂಗಳೂರಿನ ಹಳೆ ತಲೆಮಾರಿನ ಜನಕ್ಕೂ ಹೊಸತಲೆಮಾರಿನ ಜನಕ್ಕೂ ಕೊಂಡಿಯಂತೆ ಇದ್ದವರು. 'ಕಲಾ' ಪತ್ರಿಕೆ ಹೊರತಂದವರು. ಹತ್ತಾರು, ಕಲಾವಿದರಿಗೆ ಸ್ಫೂರ್ತಿಯನ್ನು ಆಶ್ರಯವನ್ನೂ ಕೊಟ್ಟವರು. ಹೆಬ್ಬಾರರ ರೇಖೆಗಳಲ್ಲಿ ಅಡಗಿರುವ ಸತ್ತ್ವ ಸೌಂದರ್ಯ ಹಾಗೂ ಅವರ ವಿಶಿಷ್ಟ ವ್ಯಕ್ತಿತ್ವವನ್ನು ಹರಿಹರಪ್ರಿಯ ಚಿತ್ರಿಸಿರುವ, ವಿಶ್ಲೇಷಿಸಿರುವ ಬಗೆ ವಿಶೇಷವಾಗಿದೆ. ಭಾಗಶಃ ಈ ಭಾಗದ ಅತ್ಯುತ್ತಮ ಲೇಖನ ಇದು. ಭಾಗ ಐದು ಸಾಮಾಜಿಕ ವ್ಯಕ್ತಿತ್ವವನ್ನು ಒಳಗೊಂಡ ಐವರನ್ನು ಕುರಿತದ್ದಿದೆ. ಚಿಂತಾಮಣಿಯ ಗುಂಡಪ್ಪ, ವಿದ್ಯಾವರ್ಧಕ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಎನ್.ಡಿ. ಕುಲಕರ್ಣಿ, ರಾಜಕಾರಣಿ ಡಿ. ದೇವರಾಜ ಅರಸು, ಖ್ಯಾತ ಇಂಜಿನಿಯರ್ ಜಿ.ಎಸ್. ಶಿವಣ್ಣ ಹಾಗೂ ಬೋನ್ಸಾಯಿ ಶ್ರೀನಿವಾಸ್ ಇವರಲ್ಲಿ ದೇವರಾಜ ಅರಸು ಹಾಗೂ ಬೋನ್ಸಾಯಿ ಶ್ರೀನಿವಾಸ್ ಕರ್ನಾಟಕಕ್ಕೆ ಪ್ರಸಿದ್ಧರು. ಉಳಿದವರು ತಮ್ಮ ಪರಿಮಿತಿಯಲ್ಲೆ ಸಾಧನೆಗಳಿಸಿ ಸಣ್ಣದೀಪವಾಗಿ ಉರಿದವರು. ಈ ಸಣ್ಣ ದೀಪವು ದೊಡ್ಡ ದೀಪಕ್ಕೆ ಸೋಪಾನವಾಗಿಯೂ ಇಲ್ಲಿ ಬೆಳಗಿ ನಿಂತಿದೆ. ಒಂದು ಸಂಸ್ಕೃತಿಯಲ್ಲಿ ದೊಡ್ಡ ದೀಪಕ್ಕೆ ಮಹತ್ತ್ವ ಇರುವಂತೆ ಸಣ್ಣದೀಪಕ್ಕೂ ಉಂಟು.

ಹರಿಹರಪ್ರಿಯ ಅವರ ಐವತ್ತೆರಡು ಬರಹಗಳನ್ನು ಓದಿ ಕೆಳಗಿಟ್ಟಾಗ ಕರ್ನಾಟಕ ಸಂಸ್ಕೃತಿಯ ವಿಶಿಷ್ಟ ವ್ಯಕ್ತಿತ್ವಗಳ ವಿಭಿನ್ನ ವ್ಯಕ್ತಿಗಳ ಒಳದೀಪವು ಬೆಳಗಿ ನಿಲ್ಲುತ್ತದೆ. ಪ್ರತಿಯೊಬ್ಬ ವ್ಯಕ್ತಿಯ ಸಾಮಾನ್ಯತೆ ಕುರಿತು ಹೇಳುತ್ತಿರುವಂತೆ ಅಸಾಮಾನ್ಯತೆಯನ್ನು ಕುರಿತು ಹರಿಹರಪ್ರಿಯ ಹೇಳುತ್ತಾರೆ. ವ್ಯಕ್ತಿತ್ವದ ನಯಮುಖ ಇರುವಂತೆ, ಉನ್ನಯನದ ಮುಖವನ್ನೂ ಅವರು ತೋರಿಸುತ್ತಾರೆ. ಇವೆಲ್ಲವೂ ಹರಿಹಪ್ರಿಯರು ಕಂಡ ಮುಖವೇ ಆಗಿದೆ. ಕೆಲವೊಮ್ಮೆ ಕಾಣದ ಮುಖವು ಮಾತಿನ ಜಾಲದಲ್ಲಿ ಸೂಕ್ಷ್ಮವಾಗಿ ಮಿಡಿತಗೊಳ್ಳುತ್ತದೆ. ಈ ನುಡಿ ಮಿಡಿತಗಳು ಹರಿಹರಪ್ರಿಯರ ಬರಹದ ವಿಶಿಷ್ಟ ಸಂಗತಿಯೂ ಆಗಿದೆ. ಹಲವು ವರ್ಗಗಳ, ಹಲವು ಜಾತಿಗಳ, ಹಲವು ಅಂತಸ್ತುಗಳಿಗೆ ಸೇರಿದ ವ್ಯಕ್ತಿ ಚಿತ್ರಗಳು ಇಲ್ಲಿರುವುದು ಸಾಂಸ್ಕೃತಿಕವಾಗಿ ಬಹುಮುಖ್ಯವಾದ ಸಂಗತಿ. ಒಂದೊಂದು ಬರಹದ ಹಿಂದೆ ಸೂಕ್ಷ್ಮವಾದ ನೋಟ, ಆಶವಾದ, ಅಭ್ಯಾಸ ಎದ್ದು ಕಾಣುತ್ತದೆ. ಅವು ಹಾಳತವಾಗಿ ರೂಪಣಗೊಂಡಿವೆ. ಈ ಬಗೆಯ ಬರಹಗಳನ್ನು ಕನ್ನಡದಲ್ಲಿ ಈಗ ಬರೆಯುವವರ ಸಂಖ್ಯೆಯೂ ಇಳಿಮುಖಗೊಂಡಿದೆ. ಒಂದೊಂದು ತಾಲ್ಲೂಕು, ಗ್ರಾಮ, ಜಿಲ್ಲೆಗಳು ವಿಶಿಷ್ಟ ಸಂವೇದನೆಯನ್ನು ಒಳಗೊಂಡಿದ್ದವು. ಈಗ ಇವು 'ವಿಶ್ವಗ್ರಾಮ'ಗಳಾಗಿ ವಿಶಿಷ್ಟ ಜೀವಕೋಶವನ್ನು ಕಳೆದುಕೊಳ್ಳುತ್ತಿವೆ. ದೇಸೀ ನಾಡಿಮಿಡಿತವು ಕ್ಷೀಣಗೊಂಡು 'ಮಾರ್ಗ' ಮಹಾಮಾರ್ಗವಾಗಿ ನೆಲೆಗೊಳ್ಳುತ್ತಿದೆ. ಇಲ್ಲಿಯ ಬರಹಗಳು ದೇಶಿ ನುಡಿಮಿಡಿತವನ್ನು ಒಳಗೊಂಡಿರುವುದು, ಅದನ್ನು ಕಂಡರಿಸುತ್ತ ವಿಭಿನ್ನ ಜೀವಕೋಶವನ್ನು ತೆರೆದಿರುವುದು ನಾಡಿನ ಭಾಗ್ಯ. ಈ ಬರಹಗಳು ಮುಂದಿನ ಕನ್ನಡ ಸಾಂಸ್ಕೃತಿಕ ಚರಿತ್ರೆಗೂ ಬಾಳ್ವೆಯ ಕನಸಿಗೂ ಸಂಕೇತಗಳಾಗಿವೆ.

# ಏಷಿಯಾದ ಹಣತೆಗಳು : ಹೊಸ ಚಿಂತನೆಯ ಸಂವಾದಗಳು

- ಆರ್.ಜಿ.ಹಳ್ಳಿ ನಾಗರಾಜ್

'ಏಷಿಯಾದ ಹಣತೆಗಳು' ಕನ್ನಡ ಕಾವ್ಯಲೋಕಕ್ಕೆ ವಿಶಿಷ್ಟ ಸೇರ್ಪಡೆಯ ಸಂಕಲನ. ಹಿಂದೂ, ಬೌದ್ಧ, ಜೈನ, ಸಿಖ್, ಇಸ್ಲಾಂ, ಕ್ರೈಸ್ಟ್, ಜುದಾಯಿ ಮತ್ತು ಜೊರಾಸ್ಟ್ರಿಯ ಧರ್ಮಗಳನ್ನು ಕುರಿತ ಸಂವಾದಗಳು ಈ ಸಂಕಲನದಲ್ಲಿ ಕಾವ್ಯವಾಗಿ ಮೈದಾಳಿವೆ.

ಶಿವಮೊಗ್ಗ ಆರ್. ನಾಗರಾಜರಾವ್ ಅವರ ಇಂಗ್ಲಿಷ್ ಮೂಲವನ್ನು ಕನ್ನಡಕ್ಕೆ ಸುಲಲಿತವಾಗಿ ಓದುವಂತೆ, ಅರ್ಥೈಸಿದವರು ಡಾ. ಕಮಲಾ ಹಂಪನಾ ಅವರು.

ಇತ್ತೀಚೆಗೆಯಷ್ಟೆ ನಮ್ಮಿಂದ ಕಣ್ಮರೆಯಾದ ಈ ಕೃತಿಯ ಮೂಲ ಲೇಖಕ ನಾಗರಾಜರಾವ್ ಭಾರತದ ಪ್ರಸಿದ್ಧ ಶಿಕ್ಷಣವೇತ್ತರಾಗಿದ್ದರು. ಠಾಣೆಯ ಪ್ರಾರ್ಥನಾ ಪ್ರತಿಷ್ಠಾನದ ಮತ್ತು "ದಿ ರುಹರ್ದ್ ಟ್ರಸ್ಟ್"ನ ಅಧ್ಯಕ್ಷರಾಗಿದ್ದರಲ್ಲದೆ, ಅಕ್ಷರ ಸೇತು ಹೆಸರಿನಿಂದ ವಯಸ್ಕರ ಶಿಕ್ಷಣ ಯೋಜನೆಯನ್ನು ೧೯೯೨ರಲ್ಲಿ ಯಶಸ್ವಿಗೊಳಿಸಿದ್ದರು. ಈ ಯೋಜನೆಯಡಿ ಮಹಾರಾಷ್ಟ್ರದ ಠಾಣಾ ಜಿಲ್ಲೆಯ ಒಂದು ನೂರು ಆದಿವಾಸಿ ಹಳ್ಳಿಗಳಲ್ಲಿ ಅಕ್ಷರ ಕಲಿಕೆ ಶಿಬಿರವನ್ನು ಪ್ರಾಯೋಜಿಸಿದ್ದರು.

ಭಾರತೀಯ ತತ್ವ ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಅವರ ಏಳು ಇಂಗ್ಲಿಷ್ ಕಾವ್ಯಗಳು ಪ್ರಕಟಗೊಂಡಿವೆ. ಅವುಗಳಲ್ಲಿ 'Asian Lights' (೧೯೯೮) ಪ್ರಮುಖವಾದುದು. ಈ ಕೃತಿಯನ್ನು ಕನ್ನಡ ಅವತರಣಿಕೆಗೆ ತಂದ ಡಾ. ಕಮಲಾ ಹಂಪನಾ ಭಾಷಾಂತರಕಾರರು, ಶಿಕ್ಷಣತಜ್ಞರು. ಮುಖ್ಯವಾಗಿ ಸಾಂಸ್ಕೃತಿಕ ಲೋಕದ ಮುಂಚೂಣಿಯ ಹಿರಿಯ ಲೇಖಕಿ.

*"ಮೌಲ್ಯದ ಕಾಳುಗಳ ಬಿತ್ತೋಣ*
*ನೀತಿಯ ಮರಗಳ ಬೆಳೆಸೋಣ"*

ಎಂಬ ಅರ್ಥಪೂರ್ಣ ಮಾತುಗಳಿಂದ ನಾಗರಾಜರಾವ್ ಪ್ರಸ್ತಾವನೆಯಲ್ಲಿ ಹಲವು ಮಾತುಗಳನ್ನು ದಾಖಲಿಸಿದ್ದಾರೆ.




"ಈ ನೆಲದ ಮೇಲಿನ ಬದುಕನ್ನು ಅರ್ಥಮಾಡಿಕೊಳ್ಳಲು ಕಟ್ಟಿದ ಸೇತುವೆಗಳೆಂದು ಶಿಕ್ಷಣದ ಸಾರವನ್ನು ಸಂಕ್ಷಿಪ್ತಗೊಳಿಸಿ ಹೇಳಬಹುದು. ಬಹುಶಃ ಮನುಷ್ಯನಿಂದ ಉಂಟಾಗಿರುವ ಪ್ರಪಂಚದ ಅನಾರೋಗ್ಯಕ್ಕೆ ಪರಿಹಾರವನ್ನು, ಮನುಷ್ಯನನ್ನು ತಿದ್ದುವುದರಿಂದಲೇ ಮಾಡಬಹುದು. ಬದುಕಿನ ಪ್ರಾರಂಭದಿಂದಲೇ ಶಾಲೆ ಹಾಗೂ ಮನೆಗಳಲ್ಲಿ ವಿದ್ಯಾಭ್ಯಾಸದ ಮೂಲಕ ಈ ಮೌಲ್ಯಗಳನ್ನು ಒಗ್ಗೂಡಿಸಬಹುದು. ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡುವಲ್ಲಿ ಮಾನವೀಯ ಮೌಲ್ಯಗಳನ್ನು ಬಿಂಬಿಸುವಲ್ಲಿ ಇಂಥ ವಿದ್ಯಾಭ್ಯಾಸ ಕೇಂದ್ರೀಕೃತವಾಗಬೇಕು...

ಏಷ್ಯಾಖಂಡವನ್ನು ಬೆಳಗಿದ ಎಂಟು ಧರ್ಮಗಳಲ್ಲಿರುವ "ಸರ್ವಧರ್ಮ ಸಮಭಾವ" ಸಾರವನ್ನು ಅಳವಡಿಸಿ, ಜಾತ್ಯಾತೀತ ಶಿಕ್ಷಣದ ಮೂಲಕ ರಾಷ್ಟ್ರೀಯ ಏಕತೆಯನ್ನು ಬಿಂಬಿಸುವ ಪ್ರಯತ್ನವೇ "ಏಷಿಯಾದ ಹಣತೆಗಳು" ಎಂದು ಹೇಳಿದ ನಾಗರಾಜರಾವ್ ಮಾನವತಾವಾದವನ್ನು ಎತ್ತಿ ಹಿಡಿವ ನಿಟ್ಟಿನಲ್ಲಿ ಚಿಂತನೆ ನಡೆಸಿದ್ದಾರೆ. "ನನ್ನ ವಿಷಯ ಮನುಷ್ಯನನ್ನು ಕುರಿತದ್ದು, ದೇವರಲ್ಲ. ನನ್ನ ಗುರಿ ಭೂಮಿಯೇ ಹೊರತು ಸ್ವರ್ಗವಲ್ಲ" ಎಂಬ ಮಾತನ್ನು ಧೈರ್ಯವಾಗಿ ಹೇಳಿದ್ದಾರೆ.

"ಏಷಿಯಾದ ಹಣತೆಗಳು" ಉಪನಿಷತ್ತುಗಳ ಮಾದರಿಯಲ್ಲಿವೆ, ಗುರು-ಶಿಷ್ಯರ ಸಂವಾದದ ಪ್ರಶ್ನೋತ್ತರಗಳ ರೀತಿಯಲ್ಲಿವೆ.

*"ನದಿಯಲೆಯ ಮೇಲೆ ನನ್ನ ನಾವೆ ಒಂಟಿ, ಚಂದ್ರಮನೆ ಸಹಯಾತ್ರಿ*<br>
*ನಿಶ್ಯಬ್ದ ರಾತ್ರಿಯೆಲೆಲ್ಲೂ ಕೇಳಲೊಲ್ಲದು ಯಾರ ಸೊಲ್ಲೂ*<br>
*ಕಂಡೆ ನಾ ಆಗ ಅಲ್ಲಿ ಕುಳಿತ 'ಸಬರಮತಿಯ ಸಂತ'ನನು*<br>
*ಯೋಗ ಮುದ್ರೆಯಲಿ ಜಪಿಸುವನು ರಾಮನಾಮ ಮಂತ್ರವನು"* (ಪುಟ ೧)

ಸಬರಮತಿ ಸಂತನೆಂದು ಗುರ್ತಿಸುವ ಮಹಾತ್ಮಾಗಾಂಧೀಜಿ ಅವರ ರಾಜಕೀಯ ಅಸ್ತ್ರ, ಹಿಂಸಾ ಮಾರ್ಗವಲ್ಲದ 'ಅಹಿಂಸೆ.' ಹೀಗಾಗಿ 'ಅಹಿಂಸಾ ಪರಮೋಧರ್ಮಃ' ಎಂಬ ಶೀರ್ಷಿಕೆಯ ಕಾವ್ಯ ಗಾಂಧಿಯ ಸತ್ಯ ನುಡಿಗಳತ್ತ ಬೆಳಕು ಚೆಲ್ಲುವುದಾಗಿದೆ. ವಾರದ ಒಂದು ದಿನದ ಮೌನ, ಪಶ್ಚಾತ್ತಾಪದ ಪ್ರಾರ್ಥನೆ ಅವರ ಬದುಕಿನ ಅಂಗವೇ ಆಗಿತ್ತು. ಜೈನಧರ್ಮದ 'ಅಹಿಂಸಾ' ಅವರ ಮೇಲೆ ಪ್ರಭಾವ ಬೀರಿತ್ತು. ಮಾನವ ಮೌಲ್ಯದ ಸಂಕೇತ ಜೈನಧರ್ಮವೆಂದು ತಿಳಿದಿದ್ದ ಗಾಂಧಿ, ಉದಯಿಸುವ ಸೂರ್ಯನಿಗೆ ಕೈ ಜೋಡಿಸುತ್ತ ಎಲ್ಲರಿಗೂ ಸನ್ಮತಿನೀಡು ಎಂದು ಪ್ರಾರ್ಥಿಸುವ ಅರ್ಥ; ಬದುಕು, ಬದುಕಲು ಬಿಡು ಎನ್ನುವಲ್ಲಿ ಅರ್ಥಪೂರ್ಣ ದನಿ ಪಡೆದಿದೆ. (ಪುಟ ೧-೫) 'ಬುದ್ಧ ದೇವಗೆ ಮೊರೆ' (ಪುಟ ೩೮) ಎಂಬ ಶೀರ್ಷಿಕೆಯ ಕಾವ್ಯದಲ್ಲಿ,

*"ತೂಗಾಡಿ ಬೀಸಿತು ತಂಗಾಳಿ ಎಳೆ ಎಲೆಗಳ ಮೇಲೆ,*<br>
*ಪರಿಮಳ ಬೀಗುವ ಹೂ ಹಣ್ಣುಗಳಿಗೆ ಜೋಗುಳ,*<br>
*ಸತ್ಯ, ಸೌಂದರ್ಯ, ಪ್ರೀತಿ, ಶಾಂತಿಯ ದಿವ್ಯಗಾನ*<br>
*ಸತ್ಯ ಶಿವ ಸೌಂದರ್ಯಮಯ ಜಗವೆಲ್ಲಾ"*

ಎನ್ನುವಲ್ಲಿ ಸರಳ ಪದ ಪುಂಜಗಳು ಕಾವ್ಯದ ಅರ್ಥೈಸುವಿಕೆಗೆ ರಹದಾರಿಯಾಗಿದೆ. ಶರಣಂಗಚ್ಛಾಮಿ ಬಾನೆಲ್ಲ ಅನುರಣಿಸಿತು. ಆ ಜಗವನ್ನು ತುಂಬಿತು ಬೆಳಕು ಎಂಬ ಆಶಯದಲ್ಲಿ ಮನುಷ್ಯ ಹರಸುವ ಶಾಂತಿಯ ನದಿ ಹರಿದಿದೆ. ಕಾವ್ಯದ ಸರಳತೆಯಲ್ಲಿ ಬುದ್ಧನ ನೆನಪು ಅವನು ತುಳಿದ ಮಾರ್ಗಗಳು ಇಲ್ಲಿ ಮತ್ತೆ ಮತ್ತೆ ಕಾಡುತ್ತವೆ.

ವಿಶ್ವದ ದಾರ್ಶನಿಕರು, ತತ್ವಜ್ಞಾನಿಗಳ ಹಲವು ಉಕ್ತಿಗಳಂತೆ ಬಂದು ಹೋಗುವ 'ಏಷಿಯಾದ ಹಣತೆಗಳು' "ನಂಬಿಕೆ ಎಂದಿಗೂ ಸ್ಥಿರ ಹಾಗೂ ಏಕರೀತಿಯದಾಗಿರಲಿ, ಕಮಲದಂತಹ ಮನ, ಶಾಂತ ಹಾಗೂ ಸ್ಥಿರವಾಗಿರಲಿ" (ಪುಟ ೫೨) ಎಂಬಲ್ಲಿ ಎಲ್ಲ ನಂಬಿಕೆಗಳು ಮನುಷ್ಯ ಸ್ವಭಾವದ ರೀತಿ ರಿವಾಜುಗಳು ಮೈತಾಳಿ ನಿಂತಿವೆ.

ಕನ್ನಡಕ್ಕೆ ಹೊಸತಾದ ಇಂಥ ಚಿಂತನೆಯ ಕೃತಿ ನೀಡಿದ ಕಮಲಾ ಹಂಪನಾ ಅವರೂ, ಇದನ್ನು ಪ್ರಕಟಿಸಿದ ಮಹಾರಾಷ್ಟ್ರದ (ಠಾಣೆ) ಪ್ರಾರ್ಥನಾ ಫೌಂಡೇಶನ್‌ನವರೂ ಅಭಿನಂದಾರ್ಹರು.

(ಏಷಿಯಾದ ಹಣತೆಗಳು (ಸಂವಾದಗಳು) ಇಂಗ್ಲಿಷ್ ಮೂಲ: ಶಿವಮೊಗ್ಗ ಆರ್. ನಾಗರಾಜರಾವ್, ಕನ್ನಡ ಅವತರಣಿಕೆ: ಡಾ. ಕಮಲಾ ಹಂಪನಾ, ಪ್ರಕಾಶನ: ಪ್ರಾರ್ಥನಾ ಫೌಂಡೇಶನ್, ಠಾಣೆ (ಮಹಾರಾಷ್ಟ್ರ) ಪುಟ ೬೮, ಬೆಲೆ ರೂ. ೫೦, ಪ್ರಕಟಣೆ: ೨೦೦೦)

# ಚಿತ್ತಾಲರ 'ಕೇಂದ್ರ ವೃತ್ತಾಂತ' - ಒಂದಿಷ್ಟು ಅನಿಸಿಕೆಗಳು

- ಗಣೇಶ್ ಕಿರಾಡಿ

'ಕೇಂದ್ರ ವೃತ್ತಾಂತ' ಯಶವಂತ ಚಿತ್ತಾಲರ ಐದನೇ ಕಾದಂಬರಿ. ಅವರ ಮೂರು ದಾರಿಗಳು, ಶಿಕಾರಿ, ಛೇದ, ಪುರುಷೋತ್ತಮ ಕಾದಂಬರಿಗಳಿಗಿಂತ ಪ್ರಸ್ತುತ ಕೃತಿ ನಿರೂಪಣೆಯಲ್ಲಿ ತಂತ್ರದಲ್ಲಿ ವಸ್ತುವಿನಲ್ಲಿ ಸಾಕಷ್ಟು ಭಿನ್ನವಾದುದು. ಇದೊಂದು ಮನುಷ್ಯ ಕೇಂದ್ರಿತ ಕಾದಂಬರಿ. ಇಲ್ಲಿ ವ್ಯಕ್ತಿಯ ನಡವಳಿಕೆಗಳು ಅವನ ಊಹೆ ಮತ್ತು ಕಲ್ಪನೆಗಳು ಸೃಷ್ಟಿಸುವ ಪ್ರಪಂಚ, ಅರಿವಿಗೆ ಬಾರದಂತೇ ಅವನನ್ನು ಸುತ್ತಿಕೊಳ್ಳುವ ಸಂಬಂಧಗಳು; ಆತ ಏನೆಲ್ಲಾ ಮಾಡಬಲ್ಲ, ಅವನ ಸಾಧ್ಯಾ ಸಾಧ್ಯತೆಗಳೇನೇನು ಈ ಮನುಷ್ಯನ ಸೃಷ್ಟಿಯ ಹಿಂದಿನ ಸೋಜಿಗ - ಹೀಗೆ ವಿವಿಧ ಮಗ್ಗಲುಗಳಲ್ಲಿ ಬೆಳೆದು ಕೇಂದ್ರ ವೃತ್ತಾಂತ ಕಾದಂಬರಿಯಾಗಿ ಮೈತಾಳಿದೆ.

ಹಾಗೆ ನೋಡಿದರೆ ಇದೊಂದು ಘಟನಾ ಪ್ರಧಾನ ಕಾದಂಬರಿ. ಇಲ್ಲಿಯ ನಾಯಕ ನಾಯಕಿ ಪ್ರತಿನಾಯಕರಾರು ಎಂದೆಲ್ಲ ಪ್ರಶ್ನೆ ಹಾಕಿಕೊಳ್ಳುವವರಿಗೆ ಉತ್ತರ ಬಹುಬೇಗ ಸಿಗಲಿಕ್ಕಿಲ್ಲ. ಇಲ್ಲಿ ಯಾರೂ ಮುಖ್ಯರಲ್ಲ ಯಾರೂ ಅಮುಖ್ಯರಲ್ಲ. ಒಂದು ಸಂದರ್ಭದಲ್ಲಿ ಕೇಂದ್ರದಲ್ಲಿ ಪಾತ್ರಗಳು ನಿಂತಂತೆ ತೋರಿದರೆ ಕೆಲವು ಕಡೆಗಳಲ್ಲಿ ಘಟನೆಗಳೇ ಮೇಲುಗೈ ಪಡೆದಂತೆ ಭಾಸವಾಗುತ್ತದೆ. ಆದ್ದರಿಂದ ಚಿತ್ತಾಲರ ಉಳಿದ ಕಾದಂಬರಿಗಳಿಗಿಂತ ಇದು ತೀರಾ ಭಿನ್ನ ಎನಿಸುತ್ತದೆ.

ಈ ಕಥೆಯ ಕೇಂದ್ರ ಸಹ ಮುಂಬಯಿಯೇ ಆಗಿದೆ. ಇಲ್ಲಿನ ಖೇತವಾಡಿಯಲ್ಲಿ ನಡೆದ ಘಟನೆಯೊಂದರಿಂದ ಕಾದಂಬರಿ ಬಿಚ್ಚಿಕೊಳ್ಳುತ್ತದೆ. ಖೇಮರಾಜ ಭವನದಲ್ಲಿ ಗುಜರಾತಿ ಮೂಲದ ರಾಮಜೀಭಾಯಿ ಹಾಗೂ ಅವನ ಹೆಂಡತಿ ಜಯಂತಿಬೇನ್ ಅವರಿಗೆ ಐವರು ಹೆಣ್ಣು ಮಕ್ಕಳು. ಅವಳಲ್ಲಿ ಹಿರಿಯವಳು ಅರುಣಾ ಎಸ್.ಎಸ್.ಸಿ.ಯ ಅನಂತರ ಶಿಕ್ಷಕಿಯಾಗಿ ಕೆಲಸ ಮಾಡಲಾರಂಭಿಸುತ್ತಾಳೆ. ಎರಡನೆಯವಳು ರೇಖಾ, ಒಂದು ರೀತಿಯಲ್ಲಿ ಈ ಕಾದಂಬರಿಯ ಕಥಾನಾಯಕಿ. ಈಕೆ ಹೇಳದೇ ಕೇಳದೇ ಒಂದು ದಿನ ಖೇತವಾಡಿಯಿಂದ ಕಾಣೆಯಾಗುತ್ತಾಳೆ. ಅವಳು ನಿಜಕ್ಕೂ ಮನೆಯಿಂದ ಕಣ್ಮರೆಯಾದಾಗ ಅವಳು ಓಡಿಹೋದದ್ದು ತನ್ನ ಪ್ರಿಯಕರ ಕೇರಳ ಮೂಲದ ಪ್ರಭಾಕರನೊಂದಿಗೆ ಎಂದು ಜನ ತಿಳಿದಿದ್ದರು. ಓಡಿ ಹೋಗಬೇಕಾಗಿದ್ದ ಹುಡುಗನೊಂದಿಗೆ ಓಡಿಹೋಗದೇ ಅವಳ ಬೇಪತ್ತೆಯಾದುದು ದೊಡ್ಡ ರಾದ್ಧಾಂತಕ್ಕೆ ಕಾರಣವಾಗುತ್ತದೆ. ಮೂರನೆಯವಳು ಉಜ್ವಲಾ ಜೀವನದಲ್ಲಿ ಏನೆಲ್ಲ ಕನಸಿ ಕೊನೆಗೆ ಬಲಾತ್ಕಾರಕ್ಕೆ ಒಳಗಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ರೇಖಾ ಖೇತವಾಡಿಯಿಂದ ನಿಗೂಢವಾಗಿ ಕಣ್ಮರೆಯಾದುದರ ಬಗೆಗೆ ಪೋಲೀಸರ ಹುಡುಕಾಟ ಆರಂಭವಾಗುತ್ತದೆ. ವರ್ಷ ಉರುಳಿದರೂ ಆಕೆಯ ಪತ್ತೆ ಸಾಧ್ಯವಾಗುವುದಿಲ್ಲ. ಮುಕುಂದರಾವ್‌ನ ವಜ್ರಧಾರಿ ಪತ್ರಿಕೆಯಿಂದ ರೇಖಾಳ ಪ್ರಕರಣ ಮತ್ತಷ್ಟು ಜಟಿಲವಾಗುತ್ತಾ ಹೋಗುತ್ತದೆ.

ಈ ಕಥಾಪ್ರಸಂಗದ ನಿರೂಪಕ ಅಭಿಷೇಕ್. ಕಾದಂಬರಿಯ ಇನ್ನೊಂದು ಪ್ರಮುಖ ಪಾತ್ರ. ರಾಮಜೀಭಾಯಿಯ ಮೂವರು ಹೆಣ್ಣು ಮಕ್ಕಳಿಗೂ ಇವನ ಮೇಲೆ ಮನಸ್ಸಿತ್ತು. ಹಿರಿಯಳಾದ ಅರುಣಾ ಇದನ್ನು ಬಾಯಿಬಿಟ್ಟು ಹೇಳದೇ ಒಲ್ಲದ ಮನಸ್ಸಿನಿಂದ ಕಾಂತಿಭಾಯಿಯನ್ನು ಮದುವೆಯಾಗುತ್ತಾಳೆ. ರೇಖಾ ನಿಗೂಢವಾಗಿ ಕಣ್ಮರೆಯಾಗಿ ನೇಪಥ್ಯಕ್ಕೆ ಸರಿಯುತ್ತಾಳೆ. ಉಜ್ವಲಾ ಬಲಾತ್ಕಾರಕ್ಕೊಳಗಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆತ್ಯಹತ್ಯೆಯ ಸಂದರ್ಭದಲ್ಲಿ ಆಕೆ ಬರೆದಿಟ್ಟ ಪತ್ರದಿಂದ ಇಡೀ ಪ್ರಕರಣಕ್ಕೆ ಹೊಸ ತಿರುವು ಬರುತ್ತದೆ. ಗೊತ್ತಿದ್ದೋ ಗೊತ್ತಿಲ್ಲದೆಯೋ ಖೇತವಾಡಿಯ ಈ ಘಟನೆಗಳೆಲ್ಲ ಅಭಿಷೇಕನ ಬೆನ್ನಿನ ಎಡತಾಕುತ್ತವೆ. ಊಹೆ ಮತ್ತು ಕಲ್ಪನೆಯಲ್ಲೇ ಅವರವರ ಅನುಭವ ವಿಸ್ತಾರದಲ್ಲಿ ಪ್ರಕರಣ ಗೋಜಲು ಗೋಜಲಾಗುತ್ತಾ ಹೋಗುತ್ತದೆ. ಖೇತವಾಡಿಯ ಈ ಘಟನೆ ಪತ್ರಿಕೆಗಳಲ್ಲಿ ಲೇಖನ ಮಾಲೆಯಾಗಿ ಮತ್ತಷ್ಟು ರೆಕ್ಕೆ ಪುಕ್ಕ ಪಡೆದುಕೊಳ್ಳುತ್ತದೆ. ರೇಖಾ ಎಂಬ ಹುಡುಗಿ ಇರಲೇ ಇಲ್ಲ, ಇದು ವಿಕೃತ ಮನಸ್ಸಿನವನೊಬ್ಬನ ಕೃತ್ಯ ಎಂದು ಮಂತ್ರಿಯೊಬ್ಬರು ಹೇಳಿಕೆ ನೀಡಿ ಮಂಗಳ ಹಾಡಲು ಮುಂದಾಗುತ್ತಾರೆ. ಕೊನೆಗೂ ರೇಖಾ ಏನಾದಳು ಎಂಬುದಕ್ಕೆ ಕಾದಂಬರಿಯಲ್ಲಿ ಉತ್ತರ ಸಿಗುವುದಿಲ್ಲ. ಒಟ್ಟಿನಲ್ಲಿ ರಾಮಜೀಭಾಯಿಯ ಹುಡುಗಿಯರ ಸುತ್ತಲೂ ಜರುಗಿದ ಘಟನೆಗಳು ನಿರೂಪಕನನ್ನು ಸುತ್ತಿಕೊಳ್ಳುವುದರಿಂದ ಈ ಕಥಾನಕದ ಕೇಂದ್ರ ಯಾರು ಎಂದು ನಿರ್ಧರಿಸುವುದು ಸುಲಭವಲ್ಲ. ಒಂದು ದೃಷ್ಟಿಯಿಂದ ಎಲ್ಲರೂ ಹೌದು ಇನ್ನೊಂದು ದೃಷ್ಟಿಯಿಂದ ಯಾರೂ ಅಲ್ಲ. ಆದ್ದರಿಂದ ಕಾದಂಬರಿಯಲ್ಲಿಯೇ "ಕೇಂದ್ರ ಹಾಗೂ ಪರಿಧಿಗಳು ಒಂದೇ ಕಾಲಕ್ಕೆ ಚಲನಶೀಲವಾಗಿದ್ದವು. ಮಾತ್ರವಲ್ಲ ಮೂಡಿ ಮೂಡಿದ ಹಾಗೆ ಕೇಂದ್ರವಾಗಿ ಬಿಡುತ್ತಿದ್ದವು. ಕೇಂದ್ರ ಅವುಗಳನ್ನು ನುಂಗಿ ಬಿಡುತ್ತಿತ್ತು ಎನ್ನುವ ಹಾಗೆ ನುಂಗಲ್ಪಟ್ಟ ಜಾಗದಲ್ಲಿ ಹೊಸ ಪರಿಧಿಗಳು ಹುಟ್ಟಿಕೊಳ್ಳುತ್ತಿದ್ದವು" ಎಂಬ ಮಾತು ಇಲ್ಲಿನ ಪಾತ್ರಗಳಿಗೂ ಚೆನ್ನಾಗಿ ಅನ್ವಯಿಸುತ್ತದೆ.

ಕಾದಂಬರಿಯ ಕೇಂದ್ರ ವೃತ್ತಾಂತವೆಂದರೆ ಬಹುಶಃ ಇದೇ ಇರಬೇಕು "ಖೇತವಾಡಿ ಎಂಬ ಒಂದು ಹಳೇ ಊರಿನಲ್ಲಿ ಖೇಮರಾಜ ಭವನವೆಂಬ ಹಾಳುಬಿದ್ದ ಕೋಟೆಯಂಥ ಬಹು ಪುರಾತನ ಚಾಳಿನಲ್ಲಿ ಆರಂಭದಲ್ಲಿ ಎಲ್ಲವೂ ಕ್ಷೇಮವಾಗಿತ್ತು. ಆಮೇಲೊಂದು ದಿನ ಚಾಳಿನವರ ಕಣ್ಮಣಿಯಾಗಿದ್ದ ರೇಖಾ ಎಂಬ ಹೆಸರಿನ ಅದೇ ಪ್ರಾಯಕ್ಕೆ ಬಂದಿದ್ದ ಚೆಲುವೆಯೊಬ್ಬಳು ಇದ್ದಕ್ಕಿದ್ದ ಹಾಗೆ ಮನೆಯಿಂದ ಬೇಪತ್ತೆಯಾದಳು. ಆಮೇಲೆ ಮಾತ್ರ ಚಾಳಿನವರ ನಿದ್ದೆ ಹಾರಿಹೋಗುವಂಥ ಘಟನೆಗಳು ಒಂದರ ಮೇಲೊಂದು ನಡೆಯತೊಡಗಿದವು, ಆದರೆ ರೇಖಾ ನಿಜಕ್ಕೂ ಏನಾದಳು ಎನ್ನುವುದು ಮಾತ್ರ ಯಾರಿಗೂ ಪತ್ತೆಯಾಗಲಿಲ್ಲ, ನಿಜ ಒಪ್ಪುವುದಾದರೆ ಆ ಪ್ರಶ್ನೆಯನ್ನು ಯಾರೂ ಕೇಳಿಕೊಳ್ಳಲಿಲ್ಲ." ಖೇತವಾಡಿಯ ಜನರ ಬಾಯಿಗೆ ಸಿಕ್ಕು ವೃತ್ತಾಂತ ಸುತ್ತಲೇ ಸಾಗುತ್ತದೆ. ಚಾಳು ತನ್ನಷ್ಟಕ್ಕೇ ಸ್ವತಂತ್ರವಾದ ಒಂದು ಪ್ರಪಂಚ. ಇಲ್ಲಿಯ ಜೀವನವನ್ನು ಮನುಷ್ಯನ ಬೇರೆ ಯಾವ ಸಾಂಘಿಕ ಜೀವನದೊಡನೆ ಹೋಲಿಸುವುದು ಸಾಧ್ಯವಿಲ್ಲ. ಇಲ್ಲಿ ಎಲ್ಲವೂ ಸಾಂಕ್ರಾಮಿಕವಾದುದು ಎಂಬ ಮಾತುಗಳು ಕಾದಂಬರಿಯಲ್ಲೇ ಸಿಗುತ್ತದೆ. ಅತ್ತ ಹಳ್ಳಿಯೂ ಅಲ್ಲದ ಇತ್ತ ನಗರದೊಳಗಿದ್ದೂ

ಬೇರೆಯಾಗೇ ಉಳಿಯುವ ಮುಂಬಯಿಯ ಚಾಳುಗಳು ಅಲ್ಲಿನ ಬದುಕು, ಇದಕ್ಕೆ ತೆಕ್ಕೆ ಹಾಕಿಕೊಳ್ಳುವ ಕ್ಷುದ್ರ ರಾಜಕೀಯಗಳಿಂದಾಗಿ ಪ್ರಸಕ್ತ ಕಾದಂಬರಿಗೆ ಒಂದು ವಿಶಿಷ್ಟತೆಯಿದೆ.

ರೇಖಾ ತನ್ನ ನೆರೆಹೊರೆಯವಳು. ತನ್ನಿಂದಾದ ಸಹಾಯವನ್ನು ಮಾಡಬೇಕೆಂದು ಅಭಿಷೇಕ್ ಆಕೆಯ ಶೋಧನೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾನೆ. ಒಂದರ್ಥದಲ್ಲಿ ಆತ ನಿಜವಾಗಿ ಈ ಕತೆಯ ನಾಯಕನಲ್ಲ. ಬರೇ ಪ್ರೇಕ್ಷಕ ಮಾತ್ರ. ಆತ ನಿಜವಾಗಿ ಇಲ್ಲಿ ಪರಿಧಿ, ಕೇಂದ್ರದಿಂದ ದೂರ ತನ್ನ ಪಾಡಿಗೆ ತಾನಿದ್ದವನು. ದುರಂತವೆಂದರೆ ಕಕ್ಷೆ ಬದಲಾಗಿ ಆಗಿದ್ದ ಪರಿಧಿ ಈಗ ಕೇಂದ್ರವಾಗಿ ರೂಪುಗೊಳ್ಳುತ್ತದೆ. "ಇದು ಆರಂಭವಾದುದು ರೇಖಾಳ ಕತೆಯಾಗಿ, ಮುಂದುವರಿದದ್ದು ಉಜ್ವಲಾಳ ಕತೆಯಾಗಿ, ಈಗ ನಿನ್ನ ಕಥೆಯಾಗಿ ಕೊನೆಗೊಳ್ಳಲು ಬಿಡಬೇಡ" ಎಂದು ನಿರೂಪಕನ ಮನಸ್ಸು ಸದಾ ಎಚ್ಚರಿಕೆ ಕೊಡುತ್ತಿರುತ್ತದೆ. ಆದರೆ ಪ್ರಪಂಚದ ಹಂಗು ಹರಿದುಕೊಳ್ಳುವುದು ಅಷ್ಟು ಸುಲಭವಲ್ಲ. ಅದು ಮುಟ್ಟಿದರೆ ಸಾಕು ಮೈಗೆ ಅಂಟಿಕೊಂಡು ಬಿಡುವಷ್ಟು ಸೂಕ್ಷ್ಮವಾದುದು. ಆದ್ದರಿಂದಲೇ ನಿರೂಪಕನ ಕತೆಯಾಗಿಯೇ ಕಾದಂಬರಿ ಅಂತ್ಯವಾಗುತ್ತದೆ.

ಬದುಕಿನಲ್ಲಿ ಯಾವುದೂ ನಿಂತ ನೀರಲ್ಲ. ಎಲ್ಲವೂ ಚಲನಶೀಲವಾದುದು. ಕಾಲ ಕ್ರಮಿಸಿದಂತೆ ಇತಿಹಾಸವೂ ಆಕೃತಿಯನ್ನು ಬದಲಿಸಿಕೊಳ್ಳುತ್ತದೆ. ಈ ಕಾರಣದಿಂದಲೇ "ಪ್ರಸ್ತುತ ಪ್ರಕರಣಕ್ಕೀಗ ನಿಶ್ಚಿತ ಆಕಾರ ಉಳಿದಿಲ್ಲ. ಉಳಿಯುವುದು ಶಕ್ಯವೂ ಇಲ್ಲ. ಹಾಗೆ ನೋಡಿದರೆ ಮನುಷ್ಯ ಪ್ರಪಂಚದಲ್ಲಿ ಯಾವುದೇ ಘಟನೆಗೆ ಇದೀಗ ವಾಸ್ತವ ಸತ್ಯ ಎನ್ನಬಹುದಾದ ಆಕೃತಿ ಇರುವುದು ಸಾಧ್ಯವೇ ಇಲ್ಲ" ಎಂಬ ನಿರೂಪಕನ ಮಾತು ಸತ್ಯ. ಇದಕ್ಕೆ ಕಾರಣ ಸಂಬಂಧಪಟ್ಟವರ ಆಸೆಗಳು. ಮುಕುಂದರಾಯ, ಶೆಟ್ಟಿ, ಜಾಹ್ನವಿ, ಗೋದಾವರಿ, ಮಾಧವ ಮಾಮಾ, ಪರಶುರಾಮ ಕಾಕಾ, ನಿರೂಪಕ ಇವರಾರಿಗೂ ಒಂದು ನಿಶ್ಚಿತ ವಿಚಾರವಿಲ್ಲ. ಇದರಿಂದಾಗಿ ಕಾದಂಬರಿಯ ಕೇಂದ್ರವೂ ಸದಾ ಚಲನಶೀಲವಾಗೇ ಉಳಿಯುತ್ತದೆ. ಈ ಕಾದಂಬರಿಯ ಸೋಲಿಗೆ ಇದೂ ಒಂದು ಕಾರಣ.

ಕೇಂದ್ರ ವೃತ್ತಾಂತ ಕಾದಂಬರಿ ತುಸು ಕಠಿಣವಾದುದು. ಸಾಮಾನ್ಯನಿಗೆ ಇದು ರುಚಿಸದೇ ಹೋದರೆ ಅದರಲ್ಲಿ ಆಶ್ಚರ್ಯವಿಲ್ಲ. ಓದುಗನಿಗೂ ಸಾಕಷ್ಟು ಹಿನ್ನೆಲೆ ಬೇಕು. ಈ ಕಾದಂಬರಿಗೆ ಮುಖ್ಯವಾಗಿ ಎರಡು ಮಗ್ಗಲುಗಳಿವೆ. ಒಂದು ಸಮಾಜ ಶಾಸ್ತ್ರೀಯ; ಇನ್ನೊಂದು ಮನಶಾಸ್ತ್ರಕ್ಕೆ ಸಂಬಂಧಿಸಿದ್ದು. ಕೇಂದ್ರ, ಪರಿಧಿ, ತ್ರಿಕೋನ, ಊಹೆ, ಕಲ್ಪನಾ ಸಿದ್ಧಾಂತಗಳು ಉನ್ನತ ಮಟ್ಟದ ಚಿಂತನೆಯನ್ನು ಒಳಗೊಂಡಿವೆ. ಅವರ ಕತೆಗಳಲ್ಲಿ ಬಹಳ ಸೊಗಸಾಗಿ ಶೈಲಿ ನಿರೂಪಣೆಗೊಂಡಿದ್ದರೆ ಈ ಕಾದಂಬರಿಯಲ್ಲಿ ಅದು ಸುತ್ತುಬಳಸಿ ಸಾಗುತ್ತದೆ. ಸಣ್ಣಕತೆಯೊಂದನ್ನು ತೀರಾ ಜಗ್ಗಿ ಎಳೆದು ಕಾದಂಬರಿಯ ರೂಪವನ್ನು ಕೊಟ್ಟಂತೆ ಕಾಣಿಸುತ್ತದೆ. ಅವರ ಪುರುಷೋತ್ತಮ ಕಾದಂಬರಿಯಿಂದಲೇ ಈ ಬದಲಾವಣೆಯನ್ನು ನಾವು ಗಮನಿಸಬಹುದು. ಆದರೂ ಮುಂಬಯಿ ಮಹಾನಗರದ ಚಾಳ್ ದರ್ಶನ, ಅಲ್ಲಿನ ನರಕ ಸದೃಶ ಬದುಕು, ಅಲ್ಲಿನ ಅವರ ವಿದ್ಯಮಾನಕ್ಕೆ ಇದು ಕನ್ನಡಿ ಹಿಡಿಯುತ್ತದೆ. ತೀರಾ ವೈಚಾರಿಕತೆಯನ್ನು ಹೊದ್ದುಕೊಂಡಿರುವ ಈ ಕಾದಂಬರಿ ನಗರ ಪ್ರಜ್ಞೆಯನ್ನು ಹುಡುಕುವ ವಿಮರ್ಶಕರಿಗೆ ಒಂದಿಷ್ಟು ಸರಕನ್ನು ಒದಗಿಸಿತು. ಕಥೆಯ ಹಂದರವೇ ತೀರಾ ಮಾಮೂಲು ಎನಿಸಿದ್ದೇ ಕಾದಂಬರಿಯ ವೈಫಲ್ಯಕ್ಕೆ ಕಾರಣವಿದ್ದೀತು. ಒಂದಷ್ಟು ಸಿದ್ಧಾಂತವನ್ನು ಪ್ರತ್ಯೇಕಿಸಿದರೆ ಇದೊಂದು ಪತ್ತೇದಾರಿ ಕಾದಂಬರಿಯಾಗಿ ಕಾಣಿಸುತ್ತದೆ. ಇದನ್ನು ಒಂದು ಕ್ರಿಯಾಶೀಲ ಕಾದಂಬರಿ ಎಂದು ಕರೆಯುವುದು ಸೂಕ್ತ.



ಸಾಹಿತ್ಯ
ಸಂಸ್ಕೃತಿ
ಕಲೆ

# ಪುಸ್ತಕ ಸ್ವೀಕಾರ

- **ಹೋರಾಟ :** (ಕಾದಂಬರಿ) ಮೂಲ: *ಆನಂದ ಯಾದವ,* ಅನುವಾದ: *ಲ. ರಾ. ಪಂಡಿತ,* ಪುಟ ೪೮೦, ಬೆಲೆ ರೂ. ೨೦೦/-
- **ವಿಚಿತ್ರವರ್ಣಾ :** (ಸಣ್ಣ ಕಥೆಗಳು) ಮೂಲ: *ರವಿ ಪಟ್ಟನಾಯಕ್,* ಅನುವಾದ: *ಸ್ನೇಹಲತಾ ರೋಹಿಡೇಕರ್,* ಪುಟ ೧೫೫, ಬೆಲೆ ರೂ. ೭೫/-
- **ಕಾಣೆಯಾದ ಟೋಪಿಯ ರಹಸ್ಯ ಮತ್ತಿತರ ಕಥೆಗಳು :** (ಕಥಾ ಸಂಕಲನ) ಮೂಲ: *ಮನೋಜ್ ದಾಸ್,* ಅನುವಾದ: *ಎಂ.ಎಸ್.ಕೆ. ಪ್ರಭು,* ಪುಟ ೨೮೧, ಬೆಲೆ ರೂ. ೧೦೦/-
- **ಗೋಡೆಗಳಿಂದ ಆಚೆಃ ಆಕಾಶ :** (ಕಾದಂಬರಿ) ಮೂಲ ಲೇಖಕಿ: *ಕುಂದನಿಕಾ ಕಾಪಡಿಯಾ,* ಹಿಂದಿ ಅನುವಾದ: *ನಂದಿನೀ ಮೆಹತಾ,* ಕನ್ನಡ ಅನುವಾದ: *ಎಸ್.ಕೆ. ರಮಾದೇವಮ್ಮ, ಲಿಂಗರಾಜು,* ಪುಟ ೩೮೯, ಬೆಲೆ ರೂ. ೧೫೦/-
- **ದೇವರ ಸ್ವಗತ :** (ಕವಿತಾ ಸಂಕಲನ) ಮೂಲ: *ಶಿವ್ ಕೆ. ಕುಮಾರ್,* ಅನುವಾದ: *ರಾಮಚಂದ್ರ ಶರ್ಮ,* ಪುಟ ೮೩, ಬೆಲೆ ರೂ. ೪೦/-
- **ಕನಕದಾಸ :** (ಕಾವ್ಯ) ಲೇ: *ಟಿ.ಎನ್. ನಾಗರತ್ನ,* ಪುಟ ೧೦೨, ಬೆಲೆ ರೂ. ೨೫/-
- **ದತ್ತಾತ್ರೇಯ ರಾಮಚಂದ್ರ ಬೇಂದ್ರೆ :** (ಅಂಬಿಕಾತನಯದತ್ತ) ಮೂಲ ಹಾಗೂ ಅನುವಾದ: *ಜಿ.ಎಸ್. ಆಮೂರ,* ಪುಟ ೧೧೮, ಬೆಲೆ ರೂ. ೨೫/-

ಈ ಮೇಲಿನ ಪುಸ್ತಕಗಳ ಪ್ರಕಾಶಕರು: ಸಾಹಿತ್ಯ ಅಕಾದೆಮಿ, ರವೀಂದ್ರ ಭವನ, ೩೫, ಫಿರೋಜ್ ಷಾಹ ರಸ್ತೆ, ನವದೆಹಲಿ - ೧೧೦ ೦೦೧.

ಪ್ರಾದೇಶಿಕ ಕಚೇರಿ: ಸಾಹಿತ್ಯ ಅಕಾಡೆಮಿ, ಸೆಂಟ್ರಲ್ ಕಾಲೇಜ್ ಕ್ಯಾಂಪಸ್, ಡಾ. ಅಂಬೇಡ್ಕರ್ ರಸ್ತೆ, ಬೆಂಗಳೂರು - ೫೬೦ ೦೦೧

- **ಭಾರತೀಯ ಕಾವ್ಯಶಾಸ್ತ್ರ ಪರಿಭಾಷೆ :** (ಸಂಸ್ಕೃತ, ಕನ್ನಡ ಕಾವ್ಯ ಮೀಮಾಂಸೆಯ ಪರಿಭಾಷೆಗಳ ವಿವರಣ ಕೋಶ) ಲೇ: *ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್,* ಪುಟ ೪೩೮, ಬೆಲೆ ರೂ. ೨೦೦/- ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ - ೫೮೩೨೭೬
- **ಗ್ರಾಮೀಣ ಸಂಸ್ಕೃತಿ ಸಂದರ್ಭಕೋಶ :** (ಚಂಪೂ) ಲೇ: *ಪ್ರೊ. ಶಿವರಾಮಯ್ಯ,* ಪುಟ ೨೩೨, ಬೆಲೆ ರೂ. ೧೦೦/- ಪ್ರ: ಕಲಾ ಪ್ರಕಾಶನ, ರಾಜಮಹಲ್ ಗುಟ್ಟಹಳ್ಳಿ, ಬೆಂಗಳೂರು - ೩.
- **ಎಡೆ :** (ಕಾವ್ಯ) ಲೇ: *ಬಿ.ಆರ್. ಲಕ್ಷ್ಮಣರಾವ್,* ಪುಟ ೮೮, ಬೆಲೆ ರೂ. ೩೦/- ಪ್ರ: ಲಿಪಿ ಪ್ರಕಾಶನ, ಬ್ಯೂಗಲ್ ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦೦೦೪.
- **ಮತಾಂತರ ಮತ್ತು ಇತರ ಲೇಖನಗಳು :** (ವೈಚಾರಿಕ ಬರಹಗಳ ಸಂಗ್ರಹ) ಲೇ:. *ಡಾ. ವಿ. ಮುನಿವೆಂಕಟಪ್ಪ,* ಪುಟ ೧೩೬, ಬೆಲೆ ರೂ. ೧೦೦/- ಪ್ರ: ವಿಚಾರವಾದಿ ಪ್ರಕಾಶನ, ೧೨೪೦, ೩ನೇ ಕ್ರಾಸ್, ಗಂಗೆ ರಸ್ತೆ, ಕುವೆಂಪುನಗರ, ಮೈಸೂರು - ೫೭೦೦೨೩

✪ **ಅನುಲೇಖ** : (ವಿಮರ್ಶಾ ಲೇಖನಗಳು) ಪುಟ ೧೩೬, ಬೆಲೆ ರೂ. ೬೦/-

✪ **ರಂಗದಂಗಳ** : (ವಿಮರ್ಶಾ ಲೇಖನಗಳು) ಪುಟ ೮೮, ಬೆಲೆ ರೂ. ೪೫/- ಈ ಎರಡು ಪುಸ್ತಕಗಳ ಲೇಖಕರು *ಡಾ. ಹೇಮಾ ಪಟ್ಟಣಶೆಟ್ಟಿ,* ಪ್ರ: ಅನನ್ಯ ಪ್ರಕಾಶನ, ಹೂಮನೆ, ಶ್ರೀದೇವಿನಗರ, ವಿದ್ಯಾಗಿರಿ, ಧಾರವಾಡ - ೫೮೦ ೦೦೪.

✪ **ಶತಮಾನ** : (ಲೇಖನಗಳು) ಲೇ: *ಮೊಗಳ್ಳಿ ಗಣೇಶ್,* ಪುಟ ೧೦೪, ಬೆಲೆ ರೂ. ೫೦/- ಪ್ರ: ಲೋಹಿಯಾ ಪ್ರಕಾಶನ, ಬಳ್ಳಾರಿ.

✪ **ದಲಿತರು ಮತ್ತು ಜಾಗತೀಕರಣ** : (ಲೇಖನಗಳು) ಲೇ: *ಮೊಗಳ್ಳಿ ಗಣೇಶ್,* ಪುಟ ೨೮೪, ಬೆಲೆ ರೂ. ೧೨೦/- ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

✪ **ಶತಮಾನದ ಕವಿತೆ ಜೋಗಿ** : (ಲೇಖನಗಳು) ಸಂ: *ಕೆ.ಸಿ. ಶಿವಾರೆಡ್ಡಿ,* ಪುಟ ೧೪೮, ಬೆಲೆ ರೂ. ೬೦/- ಪ್ರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೫೮೩೨೭೬

✪ **ಜೋಗಿತಿ** : (ಕವನಗಳು) ಲೇ: *ಪ್ರಹ್ಲಾದ ಬೆಟಗೇರಿ,* ಪುಟ ೮೦, ಬೆಲೆ ರೂ. ೫೦/- ಪ್ರ: ಸಿ.ವಿ.ಜಿ. ಪಬ್ಲಿಕೇಷನ್ಸ್, ನಂ.೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೫೬೦ ೦೦೩.

✪ **ಕೂಡಿಕೊಂಡ ಸಾಲು** : (ಕವನಗಳು) ಲೇ: *ದೇಶಕುಲಕರ್ಣಿ,* ಪುಟ ೬೬, ಬೆಲೆ ರೂ. ೪೮/- ಪ್ರ: ದೇಶಕುಲಕರ್ಣಿ, ನಂ.೧೯೨, ಸಿ.ಹೆಚ್.ಬಿ.ಎಸ್. ಲೇಔಟ್, ಮಾಗಡಿ ಕಾರ್ಡ್ ರೋಡ್, ಬೆಂಗಳೂರು - ೫೬೦ ೦೮೦.

✪ **ನೀಲಿ ಚಂದ್ರಮ** : (ಕವನಗಳು) *ಶಿವರಾಮು ಕಾಡನಕುಪ್ಪೆ,* ಪುಟ ೮೮, ಬೆಲೆ ರೂ. ೩೫/- ಪ್ರ: ಸಂವಹನ, ೧೨/೧ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು.

✪ **ಕನಕನ ಅವ್ವ** : (ಗದ್ಯ ಸಂಕಲನ) ಲೇ: *ಡಾ. ಸಿ.ಪಿ. ನಾಗರಾಜ,* ಪುಟ ೮೪, ಬೆಲೆ ರೂ. ೩೫/- ಪ್ರ: ನಾಗು ಸ್ಮಾರಕ ಪ್ರಕಾಶನ, ಕಾಳಮುದ್ದನ ದೊಡ್ಡಿ - ೫೭೧ ೪೨೨.

✪ **ನನ್ನೂರ ನನ್ನವರು** : (ಕವನಗಳು) ಲೇ: *ಉಪಲೀಕನಹಳ್ಳಿ ಬಿ. ರಾಜಣ್ಣ,* ಪುಟ ೭೨, ಬೆಲೆ ರೂ. ೨೫/- ಪ್ರ: ಅನಿಕೇತನ, ಸಾಹಿತ್ಯ ಸಾಂಸ್ಕೃತಿಕ ಸಂಶೋಧನಾಕೇಂದ್ರ, ತುಮಕೂರು.

✪ **ವರ್ತಮಾನದ ಬಿಸಿಲು** : (ಕವನಗಳು) ಲೇ: *ಬೇಳೂರು ಸುದರ್ಶನ,* ಪುಟ ೬೪, ಬೆಲೆ ರೂ. ೨೦/- ಪ್ರ: ಮಿತ್ರ ಮಾಧ್ಯಮ, ಬೆಂಗಳೂರು - ೫೬೦ ೦೩೯.

✪ **ಕನ್ನಡ ಬರುತಿದೆ ದಾರಿಬಿಡಿ** : (ಕವನಗಳು) ಲೇ: *ನಾ. ಗೀತಾಚಾರ್ಯ,* ಪುಟ ೬೪, ಬೆಲೆ ರೂ. ೨೫/- ಪ್ರ: ಸಿರಿಗನ್ನಡ ಪ್ರಕಾಶನ, ಕಸ್ತೂರಿನಗರ, ಬೆಂಗಳೂರು

✪ **ಕಾರ್ಗಿಲ್ ಕಂಪನ** : (ಕಾರ್ಗಿಲ್) ಲೇ: *ಎಸ್.ಆರ್. ರಾಮಸ್ವಾಮಿ, ದು.ಗು. ಲಕ್ಷ್ಮಣ, ಚಂದ್ರಶೇಖರ ಭಂಡಾರಿ,* ಪುಟ ೧೨೭, ಬೆಲೆ ರೂ. ೩೦/- ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು - ೫೬೦೦೧೯

# ಕಾಲದಂಗಡಿಯೆದುರು...

- ರಾಜು ಹೆಗಡೆ

ಶ್ರಾವಣದ ಮಧ್ಯಾಹ್ನ ಅದು. ಜಿಮಿರು ಮಳೆ. ಸುತ್ತೆಲ್ಲ ಹಸಿರ ಉಸಿರು. ಶನಿವಾರ ಕ್ಲಾಸು ಮುಗಿಸಿ ಸುಸ್ತಾಗಿ ಬಂದು ನೆಗಡಿಯೆಂದು ಮಲಗಿದ್ದ ಅವರು, ಮುಂಜಾನೆ ಆಸ್ಪತ್ರೆಗೆ ಹೋಗಿಬಂದ ಮೇಲೆ ಒಮ್ಮೆಲೆ ಕಾಲನ ಕೈಚಳಕಕ್ಕೆ ಶರಣಾದರು.

ನಾನು ಮೊದಲು ಅವಧಾನಿಯವರನ್ನು ಕಂಡದ್ದು ವಿದ್ಯಾರ್ಥಿಯಾಗಿ ಕಾಲೇಜಿಗೆ ಬಂದಾಗ. ಕೆಲವೇ ಕ್ಲಾಸುಗಳ ಮೂಲಕ ನನ್ನೊಳಗೆ ಇಳಿದರು. ಅವರ ನುಡಿಗಟ್ಟು, ವಿಷಯ ಮಂಡಿಸುವ ರೀತಿ, ಪ್ರಗತಿಪರ ವಿಚಾರ ನನ್ನಂಥವರಿಗೆ ಆಗತಾನೆ ಪ್ರಕಟವಾಗುತ್ತಿದ್ದ ಲಂಕೇಶ್ ಪತ್ರಿಕೆಯಷ್ಟು ಆಕರ್ಷಕವಾಗಿತ್ತು. ಬೇಸಿಕ್ ಕ್ಲಾಸುಗಳೆಂದರೆ ಸಾಮಾನ್ಯವಾಗಿ ಚಕ್ಕರ್ ಹೊಡೆಯುತ್ತಿದ್ದ ನಾವು ಅವರು ಬೇಸಿಕ್ ಹೇಳುತ್ತಾರೆಂದರೆ ತಪ್ಪಿಸಿಕೊಳ್ಳುತ್ತಿರಲಿಲ್ಲ.

ಎಂ.ಎ. ಮುಗಿಸಿ ಬಂದಮೇಲೆ ಪಾರ್ಟ್‌ಟೈಂ ಉಪನ್ಯಾಸಕನಾಗಿ ಅವಧಾನಿಯವರ ಜತೆಯೇ ಇರುವ ಅವಕಾಶ ದೊರಕಿತು. ಪಾಠ ಮಾಡುವುದರ ಎಬಿಸಿಡಿ ಗೊತ್ತಿಲ್ಲದ ನನಗೆ ಅವರು ಕಲಿಸುವುದನ್ನು ನೇರವಾಗಿ ಹೇಳಿರಲಿಲ್ಲ. 'ರಾಜು, ರಾಶಿ ಓದವೊ' ಎನ್ನುತ್ತಿದ್ದರು. ಅವರು ಹೋಗುವ ಅನೇಕ ಕಾರ್ಯಕ್ರಮಗಳಿಗೆ ಕರೆದೊಯ್ಯುತ್ತಿದ್ದರು. ಅಲ್ಲಿ ಏನಾದರೂ ಅಸಹನೆ, ಕೋಪ ಉಂಟಾದರೆ, ಭಾಷಣದ ನಂತರವೂ ಎದ್ದುನಿಂತು ಖಂಡಿಸುತ್ತಾ ನನಗೆಲ್ಲಿ ಇವರು ಎಲ್ಲರಿಂದ ತಿರಸ್ಕಾರಕ್ಕೆ ತುತ್ತಾಗುತ್ತಾರೋ ಎಂಬ ಆತಂಕ ಹುಟ್ಟಿಸುತ್ತಿದ್ದರು. ಭಾಷಣಕ್ಕೆ ನಿಲ್ಲುವವರೆಗೆ ಅಷ್ಟೇನು ಗೊತ್ತಿದ್ದವರ ಹಾಗೆ ಕಾಣದಿದ್ದ ಅವರು ನಿಂತು, ತುಂಡುತುಂಡಾದ, ವಿಚಿತ್ರವಾದ ವಾಕ್ಯ ಸರಣಿಯಿಂದ ವಿಷಯದ ಎಲ್ಲ ಮುಖಗಳ ಕಡೆಗೆ ಧಾವಿಸುತ್ತಿದ್ದರು. ಕ್ಷಣಕ್ಷಣಕ್ಕೂ ಕೇಳುಗರ ಆಸಕ್ತಿ ಕೆರಳಿಸುತ್ತ ಏನನ್ನೋ ಹೇಳಿದವರಂತೆ, ಏನೂ ಹೇಳದವರಂತೆ ಕೂತುಬಿಡುತ್ತಿದ್ದರು. ಅವಧಾನಿಯವರ ಈ ಅತಿಯಾದ ಮಾತುಗಾರಿಕೆಯೇ ಅವರ ಬರವಣಿಗೆಯ ವೇಗವನ್ನು ಕುಂದಿಸಿರಬೇಕು.

ಮುಂದೆ ನಾನು, ಕೊಂಚ ಗಡಬಡೆಯಾಗಿ ದಾಂಡೇಲಿ ಕಾಲೇಜಿಗೆ ಹೋದ ಮೇಲೆ ಮತ್ತಿಷ್ಟು ಆಪ್ತರಾದೆವು. ಊರಿಗೆ ಹೋಗಿಬರುವಾಗ ಮತ್ತು ಆಗಾಗ ಬರೆಯುತ್ತಿದ್ದ ಪತ್ರಗಳು ನಮ್ಮ ಸಂಬಂಧವನ್ನು ಹುರಿಗೊಳಿಸಿತ್ತು. ಆಗಲೇ ಅವರ ಕುಟುಂಬದ ಮುಖ್ಯವಾಗಿ, ಅವರ ಪತ್ನಿ ಅನಸೂಯರ ಆತ್ಮೀಯ ಅತಿಥ್ಯ ದೊರಕಿತು. ಯಾವಾಗಲೂ, ಯಾವ ಸ್ಥಿತಿಯಲ್ಲಿ ಹೋದರೂ ಒಂಚೂರೂ ಬೇಸರ ಮಾಡಿಕೊಳ್ಳದೆ ನೋಡಿಕೊಳ್ಳುತ್ತಿದ್ದರು. ಆಮೇಲೆ ಒಂದು ರೀತಿಯಿಂದ ಅವರ ಮನೆಯೇ ನನ್ನ ಮನೆಯಾಯಿತು. ನಾನು ಅವಧಾನಿಯವರ ಅಳಿನಾದದ್ದು ಆಕಸ್ಮಿಕ. ನನ್ನ ಮತ್ತು ಅವರ ಕುಟುಂಬದ ನಡುವೆ ಈ ಮುಂಚೆ ಎಷ್ಟು ಗಾಢವಾದ ಸಂಬಂಧವಿದ್ದರೂ ಇಂಥದ್ದೊಂದು ಸೂಚನೆ ಕೂಡ ಇರಲಿಲ್ಲ. ಅಳಿಯನಾದ ಮೇಲೂ ಮೊದಮೊದಲು ನಮ್ಮ ಸಂಬಂಧ ಯಥಾಪ್ರಕಾರ

ಮುಂದುವರೆಯಿತು. ನಾನು ಅವರಿಗೆ 'ಮಾವ' ಎಂದು ಕರೆಯುತ್ತಿರಲಿಲ್ಲ. ಈ ಬಗ್ಗೆ ಅವರಿಗೆ ಸ್ವಲ್ಪ ಬೇಸರವಿತ್ತಂತೆ. ಮತ್ತೊಂದು ಸಂದರ್ಭದಲ್ಲಿ ನಾನು ಅವರ ಅತ್ಯಂತ ವೈಯಕ್ತಿಕ ವಿಷಯದಲ್ಲಿ ಪ್ರವೇಶಿಸಿದ್ದು ಅದಕ್ಕಿಂತ ಹೆಚ್ಚಾಗಿ, ಅವರ ವಿರುದ್ಧವಾದದ್ದು ಇನ್ನಷ್ಟು ಬೇಸರ ಉಂಟುಮಾಡಿತ್ತು. ಅವಧಾನಿಯವರ ಬೇಸರವೆಲ್ಲ ತಾತ್ಪೂರ್ತಿಕ! ಮನುಷ್ಯ ಸಂಬಂಧಕ್ಕೆ ಎಲ್ಲಿಲ್ಲದ ಮಹತ್ವ ಕೊಡುತ್ತಿದ್ದರು. 'ಕೊಡುವುದೇನು ಕೊಂಬುದೇನು ಒಲವು ಸ್ನೇಹ ಪ್ರೇಮ' ಎಂಬ ಸಾಲು ಅವರಿಗೆ ಬಹಳ ಪ್ರಿಯವಾಗಿತ್ತು.

ಸಾರ್ವಜನಿಕವಾಗಿ ಇಷ್ಟವಾಗುವ ಅವಧಾನಿಯವರ ವ್ಯಕ್ತಿತ್ವ ಕೌಟುಂಬಿಕವಾಗಿ ಕೆಲವು ಸಲ ಕಿರಿಕಿರಿಯ ಸಂಗತಿಯೂ ಆಗಿತ್ತು. ಎಂದೂ ದುಡ್ಡು, ವ್ಯವಹಾರದ ಬಗ್ಗೆ ಯೋಚಿಸದಂತಿದ್ದ ಅವರು ಅಸಹನೆ ಹುಟ್ಟಿಸುತ್ತಿದ್ದರು ಅಥವಾ ಅವರ ಕುಟುಂಬದಲ್ಲಿ ಯಾರಿಗೂ ಅವರ ಸಂಕೀರ್ಣ ವ್ಯಕ್ತಿತ್ವ ಅರ್ಥವಾದಂತಿರಲಿಲ್ಲ. ಹೆಂಡತಿ ಪ್ರೀತಿಯಿಂದ ಸಹಿಸಿಕೊಳ್ಳುತ್ತಿದ್ದರು. ಮಕ್ಕಳಿಗೆ ಅವಧಾನಿಯವರ ಲೋಕ ತೀರ ಅಪರಿಚಿತ. ಹೀಗಾಗಿ ಅವರು ಮನೆಯಲ್ಲಿ ಮುಗ್ಧ ಶಿಶುವಿನಂತಿರುತ್ತಿದ್ದರು. ಆ ಸಂಬಂಧವನ್ನು ಅವರೆಂದೂ ಹಾಳುಮಾಡಿಕೊಳ್ಳಲು ಬಯಸುತ್ತಿರಲಿಲ್ಲ. ಬಹುಶಃ ಹಾಗಾಗಿಬಿಡಬಹುದೇನೂ ಎಂಬ ಆತಂಕದಿಂದ ನನ್ನ ಜತೆ ಜಾಗರೂಕರಾಗಿ ವರ್ತಿಸುತ್ತಿದ್ದರು.

ಅವಧಾನಿಯವರು ಬೆಂಕಿಬಳ್ಳಿ, ಹೊಕ್ಕಳು, ಹೊತ್ತು ಮುಳುಗುವ ಮುನ್ನ, ಗಂಗೋತ್ರಿಯ ಹಕ್ಕಿಗಳು ಎಂಬ ಕವನ ಸಂಕಲನಗಳು 'ಕ್ಯಾಸಾರ್' ಎಂಬ ಕಾದಂಬರಿಯನ್ನು 'ಪರಸ್ಪರ' ಎಂಬ ವಿಮರ್ಶಾ ಸಂಕಲನವನ್ನು ಪ್ರಕಟಿಸಿದ್ದಾರೆ. ಇನ್ನಷ್ಟು ಕವನಗಳು, ಕಣಗಿಲೆ ಎಂಬ ಕಾದಂಬರಿ ಅಪ್ರಕಟಿತವಾಗಿವೆ. ಅವರು ಕವಿತೆ, ಪಾಠ, ಭಾಷಣದಲ್ಲಿ ತೀವ್ರವಾಗಿರುವಷ್ಟು ಬೇರೆ ಯಾವುದರಲ್ಲೂ ಆಗುತ್ತಿರಲಿಲ್ಲ.

ಅಡಿಗರ ಮಾರ್ಗದಲ್ಲೇ ಬರೆಯುತ್ತಿದ್ದ ಅವಧಾನಿಯವರು ಆರಂಭದಲ್ಲಿ 'ನವ್ಯ ಸಾಹಿತ್ಯ'ದ ಭದ್ರವಾದ ಕೋಟೆಯೊಳಗಿನ ಬಂಡಾಯದ ಬೆಂಕಿಯಂತೆ ಕಾಣುತ್ತಿದ್ದರು. ಬರಬರುತ್ತ 'ಬಂಡಾಯ'ದ ಬಗ್ಗೆ ಅವರ ಒಲವು ಕಮ್ಮಿಯಾದದ್ದು ಇತ್ತೀಚಿನ ಸಂಕಲನ 'ಗಂಗೋತ್ರಿಯ ಹಕ್ಕಿ'ಗಳಲ್ಲಿ ಕಾಣಬಹುದು. ಅವರ ಬರಹಗಳಲ್ಲಿ ನನಗೆ ಲೈಕಾದದ್ದು ಕವಿತೆ ಮಾತ್ರ. ಗದ್ಯವನ್ನು ಪದ್ಯದ ತೀವ್ರತೆಯಲ್ಲಿ, ಸಂಕೀರ್ಣತೆಯಲ್ಲಿ ಬರೆಯಹೊರಟು ಅಸ್ಪಷ್ಟತೆ, ಗೊಂದಲಕ್ಕೆ ಒಳಗಾಗುತ್ತಿದ್ದರು. ಪತ್ರಿಕೆಯೊಂದು ಇದನ್ನು ಅಭಿಪ್ರಾಯಿಸಿದಾಗ ಅದು ಅವರಿಗೆ ಬಹಳ ಬೇಸರ ಉಂಟುಮಾಡಿತ್ತು. ತೀರಾ ಬಡತನದಲ್ಲಿ ಬೆಳೆದು ಬಂದ ಅವಧಾನಿಯವರು ಕೆಲವು ನಾಟಕಗಳನ್ನು ನಿರ್ದೇಶಿಸಿದ್ದರೂ ಮೂಲತಃ ನಟರಾಗಿದ್ದರು. ಜೋಕುಮಾರಸ್ವಾಮಿಯ 'ಗುರ್‍ಯ', ಸಂಕ್ರಾತಿಯ 'ಉಜ್ಜ' ಅವರ ಪೇಟೆಂಟ್ ಪಾತ್ರಗಳಾಗಿದ್ದವು. ಚಿತ್ರಕಲೆ, ಸಂಗೀತದಲ್ಲೂ ಅಪಾರ ಆಸಕ್ತಿಯಿತ್ತು.

ವೈಚಾರಿಕವಾಗಿ ಅವಧಾನಿಯವರು ಮಾರ್ಕ್ಸ್‌ನ ವಿಚಾರಗಳಿಗೆ ಮಾರು ಹೋದಷ್ಟು ಲೋಹಿಯಾ ವಿಚಾರಗಳನ್ನು ಇಷ್ಟಪಡುತ್ತಿರಲಿಲ್ಲ. ಕೆಲವು ಕಾರ್ಯಕ್ರಮಗಳಲ್ಲಿ 'ಬ್ರಾಹ್ಮಣರನ್ನು ಬೈದ' ಭಾಷಣ ಕೇಳಿದಾಗ ಹೊರಗೆ ತಮ್ಮ ವಿರೋಧ ವ್ಯಕ್ತಪಡಿಸುತ್ತಿದ್ದರು. ಅವರಿಗೆ, ಬ್ರಾಹ್ಮಣ ಎಂದರೆ ಆ ಜಾತಿಯ ಎಲ್ಲರಲ್ಲ ಎಂಬ ಸಾಮಾನ್ಯ ಸಂಗತಿಯೂ ಗೊತ್ತಾಗದವರ ಹಾಗೆ ವರ್ತಿಸುತ್ತಿದ್ದರು.

ಹಾಗೆಂದು ಅವರೆಂದೂ ಮತೀಯವಾದಿಯಾಗಿರಲಿಲ್ಲ. 'ಬಂಡಾಯ'ದ ಬಗ್ಗೂ, ಅದರ ಸಂಘಟನೆ ಕುರಿತು ವಿರೋಧವಿತ್ತೆ ಹೊರತು ತಾತ್ವಿಕವಾಗಿ ಅಲ್ಲ. ಆದರೂ ಕೊನೆಕೊನೆಗೆ ಕೌಟುಂಬಿಕ ಅನಿವಾರ್ಯತೆಯಿಂದ ಎಂಬಂತೆ ಆಚರಿಸಲೇಬೇಕಾದ ಸಂಪ್ರದಾಯದಲ್ಲಿ ಮಂಕಾದಂತಿದ್ದರು. ಯಜ್ಞ, ಹವನ, ಜ್ಯೋತಿಷ್ಯವನ್ನೆಲ್ಲ ನಂಬುವಂತೆ ಕಾಣುತ್ತಿದ್ದರು. ಜತೆಗೆ ಆ ಬಗ್ಗೆ ಸಂದೇಹವೂ ಇದ್ದಂತಿರಲಿಲ್ಲ. ದೇವರನ್ನು ನಂಬುವ ಎಳೆ ಯಾವ್ಯಾವ ಸಾಂಪ್ರದಾಯಿಕ ಕೂಪಕ್ಕೆ ನೂಕುತ್ತದೆ ಎನ್ನಲು ಬರುವುದಿಲ್ಲ. ಈ ಎಲ್ಲದರ ನಡುವೆ ಅವರ ಕಾವ್ಯ ಪ್ರತಿಭೆ ತನ್ನ ಹೊಳಪನ್ನು ಕಳೆದುಕೊಂಡಿರಲಿಲ್ಲ.

ಸಾಯುವ ಸುಮಾರು ಒಂದು ತಿಂಗಳ ಮುಂಚೆ ಪತ್ರಿಕೆಯೊಂದರಲ್ಲಿ ಅವಧಾನಿಯವರ ಒಂದು ಕವನ ಪ್ರಕಟವಾಗಿತ್ತು. ಅದು 'ಚಲೋ ಇದ್ದು' ಎಂದು ನಾನು ಹೇಳಿದಾಗ ಖುಷಿಗೊಂಡಿದ್ದರು. ಆಮೇಲೆ ಸಾಯುವ ಎರಡು ವಾರದ ಹಿಂದೆ ನಾನು ಅವರ ಮನೆಗೆ ಹೋಗಿದ್ದೆ. 'ಐವತ್ತರ ಉಯಿಲು' ಎಂಬ ಮತ್ತೊಂದು ಕವನ ಪ್ರಕಟವಾಗಿತ್ತು. ಇದೂ ಕೂಡ ನನಗೆ ಲೈಕ್ ಆಗಿತ್ತು. ಆದರೆ ಮತ್ತೆ 'ಚಲೊ ಇದ್ದು' ಎಂದರೆ ಕೃತಕವಾಗುತ್ತದೆಂದು ಹೇಳಿರಲಿಲ್ಲ. ಪತ್ರದ ಮೂಲಕವೂ ಹೇಳಿರಲಿಲ್ಲ. ಕೊನೆಗೆ 'ಸೀರಿಯಸ್' ಎಂದು ಹೋದಾಗ ಕೇಳಲು ಅವರಿರಲಿಲ್ಲ. ಆಗಲೇ ಕಾಲದಂಗಡಿಯೆದುರು ಜೀರ್ಣವಾಗಿದ್ದರು.

## ಕವನ

ಮುಂಜಾನೆಯ ಹೂಬಿಸಿಲಿಗೆ
ಹೊಡೆಯರಳುವ ಪುಳಕ
ಸುಳಿಯುವ ತಿಳಿಗಾಳಿಗಳು
ಕಚಗುಳಿಸುವ ತವಕ
ಮೈಮುರಿಯಿತು ಹೊಳೆ
ಕರಿ ಚಾದರ ಸರಿಸಿ
ಇಳೆಗೇತಕೊ ಚಳಿ, ಉಹುಹೂ
ಕಣ್ಣಲೆ ಕನಸನು ಇರಿಸಿ
ಗರಿಗರಿಯಲು ಚಿನ್ನದ ಗೆರೆ
ಹರಡಿವೆ ಹೊಂಬಾಳೆ
ನುಡಿನುಡಿಯಲು ಹೊಸ ಹಾಡನು
ಪಲಕುವ ಹಸುಳೆ
ಹರೆಯದ ಗಿಡಗಿಡದಲು
ಚೈತನ್ಯದ ಕಿರಣ
ಹೂ ಹಣ್ಣಲಿ ಮಗ್ಗದೆಯಲಿ
ಕಣ್ಣೊಡೆದಿದೆ ಕವನ.

- ಜಿ.ಎಸ್. ಅವಧಾನಿ

## ಈ ಸಂಚಿಕೆ ಲೇಖಕರು ಹಾಗೂ ವಿಳಾಸ:


★ ಡಾ. ಕೆ. ಕೇಶವಶರ್ಮ
ಕನ್ನಡ ಅಧ್ಯಯನ ಸಂಸ್ಥೆ, ಜ್ಞಾನ ಸಹ್ಯಾದ್ರಿ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ - ೫೭೭೪೫೧.

★ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್
ರಿಜಿಸ್ಟ್ರಾರ್, ಹಂಪಿ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಕಮಲಾಪುರ - ೫೮೩೨೭೬.

★ ಡಾ. ಸರಜೂ ಕಾಟ್ಕರ್
'ಕಾವ್ಯ', ಎಂ.ಐ.ಜಿ. ೨೧೫, ಮಹಂತೇಶನಗರ, ಬೆಳಗಾಂ ೫೯೦೦೦೩

★ ಡಾ. ಎಚ್.ಎಸ್. ಶಿವಪ್ರಕಾಶ್
ಸಂಪಾದಕ: ಇಂಡಿಯನ್ ಲಿಟರೇಚರ್, ಸಾಹಿತ್ಯ ಅಕಾಡೆಮಿ, ರವೀಂದ್ರ ಭವನ, ಫಿರೋಜ್ ಷಾ ರಸ್ತೆ, ನವದೆಹಲಿ - ೧೧೦೦೦೧

★ ರಾಜು ಸಿ. ಕಂಬಾರ
೧೩೬, ಸೆಟ್‌ಲೈಟ್ ಟೌನ್, ಕೆಂಗೇರಿ ಉಪನಗರ, ಬೆಂಗಳೂರು - ೫೬೦೦೬೦.

★ ಪ್ರೊ. ಶಿವರಾಮಯ್ಯ
'ಅಮ್ಮಾಜಿ', ೧೨೧, ೧೩ನೇ ಮೇನ್, ಎಂ.ಸಿ. ಬಡಾವಣೆ, ವಿಜಯನಗರ, ಬೆಂಗಳೂರು - ೪೦.

★ ಡಾ. ಆರ್.ವಿ. ಭಂಡಾರಿ
ಅರೆ ಅಂಗಡಿ, ಕೆರೆಕೋಣ - ಅಂಚೆ, ಹೊನ್ನಾವರ ತಾ||, ಉತ್ತರ ಕನ್ನಡ ಜಿಲ್ಲೆ, ೫೯೧೪೦೧.

★ ನಜೀರ್ ಚಂದಾವರ
ಸಹ ಸಂಪಾದಕ, 'ಅನ್ವೇಷಣೆ', ರಾಮನ್ ಬೈಲು, (ರಾಮನಗರ) ಸಿರಸಿ - ೫೮೧೪೦೧.

★ ಶಂಕರ ಕಟಗಿ
'ಬುದ್ಧ ನಿವಾಸ', ಎಲ್.ಐ.ಜಿ.-೭೧, ಹುಡ್ಕೊ ಕಾಲನಿ, ಜಲನಗರ, ಬಿಜಾಪುರ - ೫೮೬೧೦೧.

★ ಅಬ್ದುಲ್ ರಶೀದ್
ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ ಕೇಂದ್ರ, ಮಂಗಳೂರು - ೫೭೭೫೦೪.

★ ಮುದೇನೂರು ಸಂಗಣ್ಣ
ಚಿಗಟೇರಿ - ೫೮೩೧೨೭, ದಾವಣಗೆರೆ ಜಿಲ್ಲೆ

★ ರಾಜು ಹೆಗಡೆ
ಕನ್ನಡ ಉಪನ್ಯಾಸಕರು, ಎಂ.ಎಂ. ಮಹಾವಿದ್ಯಾಲಯ, ಸಿರಸಿ - ೫೮೧೪೦೧ (ಉ.ಕ)


---

## ಮುಂದಿನ ಸಂಚಿಕೆಯಲ್ಲಿ

ಡಾ. ಬಿ.ಸಿ. ರಾಮಚಂದ್ರಶರ್ಮ, ಡಾ. ಯು.ಬಿ. ಪವನಜ, ಡಾ. ಎಚ್.ಎಸ್. ಶಿವಪ್ರಕಾಶ್, ಎ.ಎಸ್. ಮೂರ್ತಿ, ಜ.ಹೊ.ನಾ., ಪ್ರೊ. ಜಿ.ಎಸ್. ಅವಧಾನಿ, ಡಾ. ಕೇಶವಶರ್ಮ, ಡಾ. ಆರ್ಕೆ ಮಣಿಪಾಲ, ಕಿರಣ್ ಭಟ್, ಆರ್. ಹಂಸಾ, ಮಂಗ್ಳೂರು ವಿಜಯ ಮುಂತಾದವರ ಬರಹಗಳು.

---

ಪ್ರಿಯ ಸಂಪಾದಕರೆ,

ನಿಮ್ಮ ಪತ್ರಿಕೆ (ಸಂ. ೫೮) ನವಕರ್ನಾಟಕದಲ್ಲಿ ಕೊಂಡುಕೊಂಡೆ. ಸಂಚಿಕೆ ಮೌಲಿಕ ಲೇಖನ ಒಳಗೊಂಡು ಬಂದಿದೆ. 'ಅನ್ವೇಷಣೆ' ಸಾಹಿತ್ಯದ ಊರುಗೋಲಾಗಿ ನಿಮ್ಮ ಕೈಲಿರಲಿ ಎಂದಿರುವ ನಿಮ್ಮ ಮಾತು, ಈ ಸಂಚಿಕೆ ನೋಡಿದರೆ ಸತ್ಯವೆನಿಸುತ್ತದೆ. ಹಿಂದೆ ಒಂದೆರಡು ಸಂಚಿಕೆಗಳನ್ನು ಸೆಂಟ್ರಲ್ ಕಾಲೇಜಿನ ಸೆನೆಟ್‌ಹಾಲಿನ ವಿಚಾರ ಸಂಕಿರಣದ ಸಂದರ್ಭದಲ್ಲಿ ಕೊಂಡಿದ್ದೆ. ಆಗಲೇ ಬರೆಯಬೇಕೆನ್ನಿಸಿದ್ದರೂ ಬರೆಯಲಾಗಲಿಲ್ಲ.

ಸಾವಿನ ಸರಮಾಲೆಯಲ್ಲಿ ಸಿಕ್ಕವರ ನೆನಪನ್ನು ತುಂಬಾ ಚೆನ್ನಾಗಿ ಮಾಡಿದ್ದೀರಿ. ಕೆಲವರು ನಮ್ಮಿಂದ ದೂರವಾಗಿ ತುಂಬಾ ಕಾಲದವಾದರೂ, ಅವರ ನಿಮ್ಮ ನಡುವಿನ ಸ್ನೇಹ - ಪ್ರೀತಿ - ಜಗಳಗಳನ್ನು ಬಿಡಿಸಿಟ್ಟಿದ್ದೀರಿ. ಅದರಲ್ಲೂ ಲಂಕೇಶ್ ಬಗ್ಗೆ ಪುಟ್ಟದಾದರೂ ಅರ್ಥಪೂರ್ಣವಾಗಿದೆ.

ನಿಜಕ್ಕೂ ಪದ್ಯಗಳು ಗೂಢವಾಗಿ ಚಿಂತಿಸುವಂತಿವೆ. ಪುಷ್ಪಾ ಅವರ ಬುದ್ಧ, ಎಲ್. ಹನುಮಂತಯ್ಯ ಅವರ ನನ್ನೊಳಗೊಬ್ಬ ಬುದ್ಧ, ರಿಲ್ಕನ ಬುದ್ಧ, ನಿಮ್ಮ ಪೋಖ್ರಾನ್ ಮರಳ ಮಂದಸ್ಮಿತ, ಜೊತೆಗೆ ಮನಜರ ೨೦೦೦ದ ಹಿಂದಿನ ಕತೆ - ಹೊಸ ವಿಚಾರ, ಹೊಸ ಚಿಂತನೆ, ನೋಟದಿಂದ ಕೂಡಿದೆ.

ಒಂದು ಸಲಹೆ - ಪುಸ್ತಕ ವಿಮರ್ಶೆ ಹೆಚ್ಚಾಗಿರಲಿ. ಸ್ವೀಕಾರಕ್ಕೆ ನಿಮಗೆ ಬಂದ ಪುಸ್ತಕಗಳನ್ನು ನೋಡಿದರೆ ಅಸೂಯೆ ಬರುತ್ತದೆ! ನಿಮ್ಮನ್ನು ಬೇಟಿ ಮಾಡಿ ಚಂದಾ ಕೊಡುತ್ತೇನೆ. ಪತ್ರಿಕೆ ನಿಯಮಿತವಾಗಿ ಬರಲು ನನ್ನಿಂದ ಆಗುವ ಸಹಾಯ ಮಾಡುವೆ. ಒಂದಿಬ್ಬರು ಸ್ನೇಹಿತರನ್ನು ಚಂದಾದಾರರನ್ನಾಗಿಸುವೆ.

*ಆರ್.ಟಿ.ನಗರ, ಬೆಂಗಳೂರು - ೩೨.* - ಇಕ್ಬಾಲ್ ಅಹಮದ್

ಪ್ರಿಯ ನಾಗರಾಜ್,

*ಅನ್ವೇಷಣೆ* (ಸಂಚಿಕೆ ೫೮) ಹೆಸರಿಗೆ ಅನ್ವರ್ಥವಾಗಿಯೇ ಬರುತ್ತಿರುವುದು ಸಂತೋಷದ ಸಂಗತಿ. ನೀವು ದಿನಪತ್ರಿಕೆಯೊಂದಕ್ಕೆ ಕೆಲಸಕ್ಕೆ ಸೇರಿ, ನಿಮ್ಮ ಬದ್ಧತೆಗೆ ಭಂಗ ಬರುವ ಸೂಚನೆ ಕಂಡಾಗ ಅದನ್ನು ತೊರೆದು ಬಂದದ್ದು, ರಾಜಿ ಕಬೂಲಿಗೆ ನಿಂತಿರುವ ಇಂದಿನ ಯುವ ಪೀಳಿಗೆಗೆ ಒಂದು ಪಾಠವೆನಿಸಿದೆ. ಮಾಹಿತಿ ತಂತ್ರಜ್ಞಾನ (IT) ಹಾಗೂ ಅಂತರ್ಜಾಲ (Internet)ಗಳು ಭೂವ್ಯೋಮಗಳಿಗೆ ತನ್ನ ಸಂಸ್ಕೃತಿಯನ್ನು ಹರಡುತ್ತಿರುವಾಗ ಓದುವ ಪೀಳಿಗೆಯೇ ಇಲ್ಲವೆಂಬಂತಾಗುತ್ತಿದೆ. ಇಂಥಲ್ಲಿಯೂ ಅನ್ವೇಷಣೆಯ ಧೈರ್ಯವೇ ಧೈರ್ಯ. ಹದಿನಾರು ಮಾಸಗಳ ಅಜ್ಞಾತ ಕಳೆದು ಮತ್ತೆ 'ಷೋಡಶಿ'ಯಾಗಿ ರೂಪುಗೊಂಡಿದೆ. ಪ್ರೊ. ಕೆ.ಜಿ.ಎನ್. ಅವರ ಮರುಚಿಂತನೆಯ ಒಳ ದನಿ ಏನೆಂಬುದನ್ನು ಜಿ.ಪಿ. ಬಸವರಾಜ್ ಅವರು ಸಾಂಸ್ಕೃತಿಕ ಮುಖಾಮುಖಿಯಲ್ಲಿ ಎತ್ತಿ ಹಿಡಿದಿದ್ದಾರೆ. ಇತಿಹಾಸಕಾರರು ಟಿಪ್ಪುವಿನ ಬಗ್ಗೆ ತಳೆದಿರುವ ಎರಡು ಅತಿ ಧೋರಣೆಗಳನ್ನು ಗಮನಿಸಿ ಅದನ್ನು ಸಮತೋಲನ ಮಾಡಬೇಕಾದ ಐತಿಹಾಸಿಕ ಪ್ರಜ್ಞೆಯನ್ನು ಡಾ. ಎಸ್. ಚಂದ್ರಶೇಖರ್ ಸೂಚಿಸಿದ್ದಾರೆ. ಪ್ರೊ. ಮನಜ ಅವರು "೨೦೦೦ದ ಅಜ್ಞಾತ ಕಥೆ"ಯಲ್ಲಿ ಡಾ. ಅಂಬೇಡ್ಕರ್ ಅವರು ಸೂಚಿಸಿದ ಹಾದಿಯಲ್ಲಿ ನಡೆದು, ಸಿದ್ಧಾರ್ಥನು ಅರಮನೆಯನ್ನು ತೊರೆಯಲು ಹೇಳಿರುವ ಸಾಂಪ್ರದಾಯಿಕವಾದ ಘಟನೆಗಳನ್ನು ಅಲ್ಲಗಳೆದು 'ಬಹಿಷ್ಕಾರ' ಕಾರಣವೆಂಬುದನ್ನು ತಿಳಿಸಿರುವುದು ನಿಜಕ್ಕೂ ಸಮರ್ಥನೀಯವಾಗಿದೆ. ಜಿ.ಎನ್. ಮೋಹನ್ "ಚೆ ಎಂಬ ಹುಚ್ಚು"ವಿನ ಶೈಲಿ ನಮಗೂ ಹುಚ್ಚು ಹಿಡಿಸುತ್ತದೆ. ಬುದ್ಧನ ಬಗೆಗಿನ ಕವಿತೆಗಳು ಸಂದರ್ಭೋಚಿತವಾಗಿವೆ. ಸಾಹಿತ್ಯ, ಸಂಸ್ಕೃತಿ, ಕಲೆಗೆ ಸಂಬಂಧಿಸಿ ಇಷ್ಟು ಸುಂದರವಾಗಿ 'ಅನ್ವೇಷಣೆ' ಮಾಡಿರುವ ನಿಮಗೆ ಅಭಿನಂದನೆಗಳು ಸಲ್ಲಬೇಕು, ಜೊತೆಗೆ ಚಂದಾ ಹಣವೂ.

*ಎಂ.ಸಿ.ಬಡಾವಣೆ, ವಿಜಯನಗರ, ಬೆಂಗಳೂರು - ೪೦.* - ಪ್ರೊ. ಶಿವರಾಮಯ್ಯ

**ANVESHANE** Edited - Printed - Published & Owned by **R.G. Halli Nagaraj,**
37/2 A 'Nisarga', Nagarabhavi Road, Vijayanagar, BANGALORE - 560 040. ✆ : 340 4244